# ಭಟ್ಟರ ಮಗಳು



ಶ್ರೀನಿವಾಸ



ಜೀವನ ಕಾರ್ಯಾಲಯ
ಬೆಂಗಳೂರು.

# ಭಟ್ಟರ ಮಗಳು

ಶ್ರೀನಿವಾಸ

ಜೀವನ ಕಾರ್ಯಾಲಯ
ಬೆಂಗಳೂರು.

# ಮುನ್ನುಡಿ

ಈ ನಾಟಕವನ್ನು ನಾನು ವರ್ಷದ ಹಿಂದೆ ಬೆಂಗಳೂರಿನ ಆಕಾಶ ವಾಣಿಯ ಪ್ರವರ್ತಕರ ಅಪೇಕ್ಷೆಯಂತೆ ಅವರು ಪ್ರಸಾರಮಾಡಲು ಬರೆದು ಕೊಟ್ಟೆನು.

ವೈಷ್ಣವ ಸಂಪ್ರದಾಯದ ಗೋದಾ (ಆಂಡಾಳ್) ದೇವಿಯ ಚರಿತ್ರೆಯನ್ನು ಬಲ್ಲವರು ಭಟ್ಟರು ವಿಷ್ಣುಚಿತ್ತರು ಮಗು ಆಂಡಾಳ್ ತಾಯಿ ಇರಬೇಕು ಎಂದುಕೊಳ್ಳುವುದು ಸಹಜ.

ಭಟ್ಟರಿಗೆ ಒಂದು ಮಗು ಸಿಕ್ಕಿತು ಎಂದು ಆ ಚರಿತ್ರೆ ಹೇಳುತ್ತದೆ. ಹಾಗೆಯೇ ಆ ಸಿಕ್ಕೋಣ ಜನಕರಾಜನಿಗೆ ಸೀತಾದೇವಿ ಸಿಕ್ಕಿದಂತೆ ಎಂದೂ ವರ್ಣಿಸುತ್ತದೆ. ಹತ್ತು ವರ್ಷದ ಹಿಂದೆ ಒಂದು ದಿನ ಈ ವಿಷಯ ಯೋಚನೆ ಮಾಡುತ್ತಿರುವಾಗ ಈ ದೃಶ್ಯದ ಮನ್ನಾರ್ ಅತ್ತುಳಾಯ್ ಇವರ ಈ ಕತೆ ನನ್ನ ಮನಸ್ಸಿನಲ್ಲಿ ತಾನಾಗಿ ಕಟ್ಟಿಕೊಂಡಿತು. ದಿನ ಕಳೆದಂತೆ ಸ್ಫುಟವಾಗಿ ಬೆಳೆದು ಅದು ಕಳೆದ ವರ್ಷ ಈ ದೃಶ್ಯವಾಗಿ ರೂಪುಗೊಂಡಿತು.

ದೃಶ್ಯದ ವಿಷಯವೆಲ್ಲ ನನ್ನ ಊಹೆಯಲ್ಲಿ ಉದಿಸಿದ್ದು. ಸಂಪ್ರದಾಯದಲ್ಲಿ ಇದಕ್ಕೆ ಯಾವ ಆಧಾರವೂ ಇಲ್ಲ.

ಈ ಊಹೆಯನ್ನು ಒಪ್ಪುವುದು ಗೋದಾದೇವಿಯ ವಿಷಯದಲ್ಲಿ ಅಪರಾಧ ಆಗುತ್ತದೆ ಎಂದು ಸಂಪ್ರದಾಯ ಪ್ರೇಮಿಗಳಿಗೆ ಕಂಡರೆ ಆಶ್ಚರ್ಯವಿಲ್ಲ. ಅಂಥ ನನ್ನ ಜನ ಈ ಕತೆಯ ಮಗು ಗೋದಾದೇವಿ ಅಲ್ಲ ಎಂದುಕೊಳ್ಳಬೇಕು. ಆ ಭಕ್ತೆಯ ಚರಿತ್ರೆಯಿಂದ ಪ್ರೇರಣೆ ಪಡೆದು ಈ ಕತೆಯನ್ನು ಕಟ್ಟಿರುವ ನನ್ನ ಧೃಷ್ಟತನವನ್ನು ಕೃಪೆಮಾಡಿ ಮನ್ನಿಸಬೇಕು.

ಬೆಂಗಳೂರು. ಸೌಮ್ಯ ಸಂವತ್ಸರ
ಜ್ಯೇಷ್ಠ ಶುದ್ಧ ಪಂಚಮಿ ೨೧-೫-೬೯

ಶ್ರೀನಿವಾಸ.

# ಭಟ್ಟರ ಮಗಳು

## ಸ್ಥಾನ ೧

(ಊರ ಹೆಟಾಕ ರಾಮತೀರ್ಥದ ಬಳಿಯ ದೇವಮಂದಿರದ ಮುಂಭಾಗದಲ್ಲಿ ಭಟ್ಟರು ಕುಳಿತಿದಾರೆ. ದೇವರನ್ನು ನೆನೆಯುತ್ತಿದಾರೆ.)

ಭಟ್ಟ

ಶ್ರೀವತ್ಸವಕ್ಷ, ನತಜನ ರಕ್ಷ, ರಘುರಾಮ,
ಇಕ್ಷ್ವಾಕು ಕುಲಸುಧಾಂಬುಧಿ ಸೋಮ, ಶುಭನಾಮ,
ಜಾನಕೀ ಹೃದಯಮಂದಿರ, ಪರಮ ಸುಂದರ,
ದುಷ್ಟನಿಗ್ರಹನೇಮ, ಅಭಿರಾಮ ಗುಣಧಾಮ,
ಜಯರಾಮ, ಕಲ್ಯಾಣರಾಮ, ದಶರಥರಾಮ,
ಶ್ರೀರಾಮ, ಕೋದಂಡರಾಮ, ರಾಮಾ, ರಾಮಾ,

(ತರುಣ ಒಬ್ಬ ಎದುರಲ್ಲಿ ಬರುತ್ತಿರುವುದು ಕಾಣುತ್ತದೆ.)

ಯಾರು ಎದುರಲಿ ಬರುತಲಿಹುದು ? ಹರೆಯದ ಚೆಲುವ.
ರಾಮನೇ ಬಂದನೆನೆ ಸಲ್ಲುವುದು. ಚೆಲುವ ಮುಖ,
ಹೋಳಿನ ಕಣ್ಣು ? ಅಲ್ಲ : ನೋವ ತಿಂದಿಹ ಕಣ್ಣು :
ದಂಡಕಾರಣ್ಯದಲಿ ವನವಾಸಗೆಯ್ವಂದು,
ಲಂಕೇಶ ದೇವಿಯನು ಕದ್ದೊಯ್ದ ಹೊತ್ತಿನಲಿ,
ಮುಖದ ಚೆಲುವಿಂತು ಚಿಂತೆಯಲಿ ಮುಸಕಾಗಿತ್ತು
ಎನಲು ಬರುವುದು. ಪಾಪ, ಯಾವ ಕಡು ಬೇನೆಯೋ,
ಯಾವ ದುರ್ಭರ ದುಃಖವೋ ! ಚೆಲುವ ಲೋಕ ಇದು :
ಇದರೊಳೀತೆರನ ಶೋಕದ ಹುಲುಸು. ಕೃಷ್ಣ ತಾ
ಹೇಳನೇ ? ನಿತ್ಯವಲ್ಲದ ಅಸುಖದೀ ಲೋಕ
ಇದ ಸಾರಿದವನು ನನ್ನನು ಆಶ್ರಯಿಸು ಎಂದು.

ಚೆಲುವ ಲೋಕವೆ ದಿಟ: ಆದರಸುಖ ಅನಿತ್ಯ.
ಈ ಚೆಲುವ ತರುಣನಿಗೆ ಈ ಹದನ ತಿಳಿಸೆಂದು
ನನ್ನ ಅಂತರ್ಯಾಮಿ ಗುರು ಬೆಸಸುತಿಹರೀಗ.

(ತರುಣ ದೂರದಲ್ಲಿದ್ದಂತೆಯೇ ದಂಡಪ್ರಣಾಮ ಮಾಡಿ
ಕೈಜೋಡಿಸಿ ಬೀಳುವನು.)

ದಂಡಪ್ರಣಾಮ ಮಾಡಿಹನು. ಇದು ರಾಮನಿಗೆ
ಸಂದಿರಲಿ. ಪರದೈವ ಅವನು ಇಹಜೀವನದಿ
ತಾನು ನೊಂದೊಂದಂದ ನೊಂದಿರುವ ಇವನುಸಿರ
ಕನಿಕರಿಸಿ ರಕ್ಷಿಸಲಿ. ಶುಭಮಸ್ತು. ಏಳಿರಿ;
ಬನ್ನಿ; ಬನ್ನಿ; ಬಳಿಗೆ ಬನ್ನಿರಿ; ಕುಳ್ಳಿರಿ.
ಯಾರು, ಏನು, ದಾಸ ಈ ನನಗೆ ತಿಳಿಸಿರಿ.

ತರುಣ

ಗುರುದೇವ, ನಾನೊಬ್ಬ ದುರ್ದೈವಿ ಬಡಪಾಯಿ.
ಸಹಿಸಲಾಗದ ದುಃಖದಾಳದಲಿ ಮುಳುಗಿಹೆನು.
ತಮ್ಮ ಸನ್ನಿಧಿಯ ಸಾರಿರಲು ಸುಖ ಅಹುದೆಂದು
ಅಡಿಯೆಡೆಗೆ ಬಂದಿಹೆನು. ವಾತ್ಸಲ್ಯ ಭಾವದಲಿ
ನನ್ನ ರಕ್ಷಿಸಬೇಕು.

ಭಟ್ಟ

ಒಂದು ಜೀವವಬಿಡದೆ
ಎಲ್ಲರನು ರಕ್ಷಿಸುತಲಿಹನು ಸೀತಾರಾಮ.
ನಿಮ್ಮನವನೇ ರಕ್ಷಿಸುವನು. ಅಳಲನು ತೊರೆದು
ಅವನಡಿಯ ನೆನೆಯೆ ಮನಮಾಡಿರಿ: ಸುಖ ಅಹುದು.
ಆದುದೇನು: ಹೇಳಿರಿ. ಹೇಳಿ.

ತರುಣ

ಗುರುವರ್ಯ
ನನ್ನೂರು ಶ್ರೀರಂಗ; ಹೆಸರು ಮನ್ನಾರ್; ಕುಲ
ದ್ವಿಜ; ಗೋತ್ರ ಶ್ರೀವತ್ಸ. ಈ ಸಲದ ಹಬ್ಬದಲಿ
ಊರ ಜನ ನಮ್ಮ ಬಂಧುಗಳು ಹಲವರು, ಜೊತೆಗೆ,
ತಿರುವನಂತಪುರದ ಅನಂತಶಯನದ ನಮ್ಮ
ಪದ್ಮನಾಭನ ದಾಸ ಕೇರಳದ ಹಿರಿರಾಜ
ಈ ಹಬ್ಬದುತ್ಸವವ ಬಹು ವಿಜೃಂಭಣೆಯಿಂದ
ನಡೆಯಿಸುವರಂತೆ, ನೋಡಿದ ಮಂದಿ ಹೇಳಿಹರು,
ನಾವೆಲ್ಲ ಯಾತ್ರೆ ಹೊರಡುವ, ಪದ್ಮನಾಭನಲಿ
ಪೂಜೆ ಸಲ್ಲಿಸಿ ಬರುವ, ಎಂದರು. ಬಹುಮಂದಿ
ಒಪ್ಪಿದರು. ಈ ಮಾತು ನಡೆವ ಹೊತ್ತಲಿ ನಾನು
ಅಲ್ಲೆ ಇದ್ದೆನು. ಇದ್ದು, ಯಾತ್ರೆ ಹೋಗುವ ಎಂದು
ನನ್ನ ಮನಸಿಗೆ ತೋರಲಿಲ್ಲ.... (ಸ್ವಲ್ಪ ತಡೆಯುವನು.)

ಭಟ್ಟ

ಕಾರಣ ಏನು
ಹೇಳ ಸಂಕೋಚವೇ ?

ತರುಣ

ತಮ್ಮ ಈ ಊಹೆ ಸರಿ.
ಸಂಕೋಚ. ಆದರದು ಈ ಮೊದಲ ವಾಡಿಕೆಯ
ಪರಿ ಅನಿತೆ. ಈಗ ನಾ ಇಂಥ ಸಂಕೋಚಗಳ
ದಾಟಿ ನಿಂತಿಹೆನು. ಕಾರಣವ ಬಿನ್ನಯಿಸುವೆನು.
ನಾಲ್ಕು ವರ್ಷದ ಹಿಂದೆ ನಾ ನಮ್ಮ ಕೇರಿಯಲಿ
ಬಹು ಚೆಲುವೆಯೆಂದು ಹೆಸರಾದೋರ್ವ ಕನ್ಯೆಯನು
ಮದುವೆಯಾದೆನು. ಅವಳ ಮದುವೆಯಾದೇವೆಂದು

ನಮ್ಮೂರ ಪುಣ್ಯವಂತರ ಮನೆಯ ತರುಣ ಜನ ಹಲಮಂದಿ ಬಯಸಿದ್ದರಹುದು. ಬಡವರ ಮಗಳು; ಆದರೋ ಕಡು ಚೆಲುವೆ. ಚೆಲುವೆಯೆಂಬುದರಿಂದ ಈ ಎಲ್ಲ ಜನ ಅವಳ ಬಯಸಿದರು. ಹಣವುಳ್ಳ ಇವರ ಆ ಹುಡುಗಿ ಒಪ್ಪಳು. ಅವಳು ಒಪ್ಪಿದುದು ನನ್ನನು.... (ಮತ್ತೆ ಕ್ಷಣ ತಡೆಯುವನು)

ಭಟ್ಟ

(ಮುಸಿನಗೆ ಸಹಿತ) ಅವಳಂತೆ ನಾನು ಸಹ ನಿಮ್ಮನೇ ಒಪ್ಪುವೆನು.

ತರುಣ

ಇದು ಅನುಗ್ರಹ. ನಾವು ಎಳೆತನದಿ ಜೊತೆಗೆ ಆಡಿದ್ದವರು. ಆಟದಲಿ ನಾನು ಪತಿ, ಇವಳು ಸತಿ, ಎಂದು ಆಡಿದುದುಂಟು. ಎಳೆತನದ ಬರಿಯ ಆಟದ ಮಾತ ಮದುವೆಯಾಗುವ ಹುಡುಗಿ ದಿಟ ಎಂದುಕೊಂಡ ತೆರ ಆಡಿದಳು. ನನಗೇನು ? ನಾನಾಗಿ ಬಯಸುವವನಲ್ಲ. ಹುಡುಗಿಯೆ ಬಯಸೆ ಬೇಡ ಎನ್ನಲಿ ಏಕೆ ? ಮದುವೆ ನಡೆಯಿತು. ಹುಡುಗಿ ಪ್ರೌಢೆ ಆದಳು. ಸ್ವಲ್ಪ ಹಿಂದೆ ದಂಪತಿ ನಾವು ಸಂಸಾರ ಹೂಡಿದೆವು. ಕೆಲವೆ ದಿನ ಕಳೆದಿದೆ. ಆಗ ಈ ಮಾತು ಬಂದಿತು.

ಭಟ್ಟ

ಅಂತಿರುತ ನೀವು ಉಳಿದವರ ಜೊತೆಗೆ ಹೊರಡುವುದೆಂಬ ಯೋಚನೆಯ ಮಾಡಲಿಲ್ಲ.

ತರುಣ

ಅಹುದು. ಜೊತೆಗಿದ್ದವರು ನಕ್ಕು ಹಾಸ್ಯಮಾಡಿದರು. ಶಾಂತಿ ಪ್ರಸ್ತ ಎಂದಿಗೆ ಎಂದು ಕಾದಿದ್ದವನು ಪ್ರಸ್ತ ನಡೆದಿನ್ನೀಗ ಮೂರು ದಿನವಾಗಿಹುದು, ಪದ್ಮನಾಭನ ಪುರಕೆ ಯಾತ್ರೆ ಹೊರಟಾನೆ ಎಂದರು. ಸುಮ್ಮನಿದ್ದವನ ನಾಚಿಕೆಗೆ ಗುರಿಮಾಡಿ ಎಲ್ಲರೊಂದಿಗೆ ನಾನು ಹೊರಡುವನು ಎಂಬ ಘಟ್ಟಕೆ ನನ್ನ ತಂದರು.

(ದುಃಖವನ್ನು ತಡೆಯಲಾರದೆ ಮುಖ ಮುಚ್ಚಿಕೊಂಡು ಸುಮ್ಮನಾಗುತ್ತಾನೆ.)

ಭಟ್ಟ

ಎಲ್ಲ ಹೊರಟಿರಿ. ಅಲ್ಲಿ ಹೋಗಿದ್ದ ದಿನಗಳಲಿ ಇಲ್ಲಿ....

ತರುಣ

(ದುಃಖವನ್ನು ತಡೆದುಕೊಂಡು)

ಇಲ್ಲಿಂದ ನಮ್ಮಾತ ಒಬ್ಬರು ಮೂರು ದಿನ ತಡೆದು ಅದೆ ಹಬ್ಬಕಲ್ಲಿಗೈತಂದರು. ಬಂದ ಇವರನು ನಾನು ಮೊದಲು ನೋಡಿದ ವೇಳೆ ಇವರು ನನ್ನನು ಏನೊ ತೆರದಿ ನೋಡಿದರೆಂದು ನನಗೆ ತೋರಿತು. ಕೆಲವು ನಿಮಿಷ ಕಳೆದಿದೆ, ಅವರು ನನ್ನ ಜೊತೆ ಜನಕೆ ನನ್ನನು ಕುರಿತು ಏನನೋ ಹೇಳುತಿರುವಂತೆ ಕಂಡಿತು. ಏತರದೊ ಕೆಟ್ಟ ಸುದ್ದಿ ಇರಬೇಕು. ಏನದು ? ಇವರು ನನ್ನತ್ತ ಕನಿಕರದ ನೋಟವನು ಬೀರಿದುದು ಕಂಡಿತು.

ಆತನನೆ ಕೇಳುವುದೆ ? ಬೇಡ. ಇವರಲಿ ನನಗೆ
ತುಂಬ ಬೇಕಾದವರ ಕೇಳುವುದು ಎಂದೆಣಿಸಿ
ಅವರ ಬಳಿ ಸಾರಿದೆನು. ನಾನು ಬರುವುದ ಕಂಡು
ಆತ ದೂರಕೆ ಸಾರಿದನು. ನಾನು ಬಿಡಲಿಲ್ಲ.
"ಗೋಪಾಲ ನಿಲ್ಲು. ಓಡುವೆಯೇಕೆ? ಏನದು
ರಾಜಣ್ಣ ಹೇಳಿದುದು ? ನನ್ನ ಕುರಿತೇನನೋ
ಹೇಳುತಿದ್ದಂತೆ ಕಂಡಿತು," ಎಂದೆನು. ಅವನು
ನಿಂತನು. ನಾನು ಬಳಿ ಸೇರಿರಲು ಕಣ್ಣೀರು
ಸುರಿಸುತ್ತ, "ನಾವಿತ್ತ ಹೊರಟ ಮಾರಣೆದಿವಸ
ಅತ್ತು ಳಾಯ್ ಕಾವೇರಿಯಲಿ ಮಿಾಯಹೋದವಳು
ಕಾಲ್ಜಾರಿ ನೀರಿನಲಿ ಕೊಚ್ಚಿಹೋದಳು ಎಂದು
ರಾಜಣ್ಣ ಹೇಳಿದನು. ಇಷ್ಟವಿಲ್ಲದೆ ನೀನು
ಇತ್ತ ಯಾತ್ರೆಗೆ ಹೊರಟ ಹೊತ್ತು ನಿನ್ನಷ್ಟಕ್ಕೆ
ಬಹು ಕೆಟ್ಟಹೊತ್ತು ಅದು," ಎಂದನು. ನನ್ನುಸಿರೆ
ಹಾರಿಹೋಯಿತು. ಕಣ್ಣು ಇರುಳು ಕಟ್ಟಿತು. ಎಂತೊ
ಸಹಿಸಿಕೊಂಡಂತೆ ನಿಂತೆನು. ಅದೇ ಕ್ಷಣ ಇನ್ನು
ದೇವಾಲಯದಲಿ ನಿಲ್ಲುವುದು ಸರಿಯಲ್ಲೆಂದು
ಹೊರಗೆ ಬಂದೆನು. ಕಲ್ಲಪೀಠ ಒಂದರ ಮೇಲೆ
ಕುಳಿತು ನನ್ನಿನಿಯಳನು ನೆನೆನೆನೆದು ಅಳಲಿದೆನು.
ರಂಗನಾಥನಿಗೆ, "ನನ್ನಾವ ಪಾತಕಕಾಗಿ
ನನಗೆ ಈ ಶಿಕ್ಷೆಯನು ನೀನು ವಿಧಿಸಿದೆ," ಎಂದು
ಮೊರೆಯಿಕ್ಕಿದೆನು. "ನನ್ನ ತಪ್ಪೆನ್ನುವುದು ಒಂದು
ಲವಲೇಶ ಇಲ್ಲ. ನಿನ್ನಲಿ ಕರುಣೆ ಇನಿಸಿಲ್ಲ.
ನಾ ನಿನ್ನನೊಲ್ಲೆ," ಎಂದೆನು. ಇನ್ನು ಶ್ರೀರಂಗ
ನನ್ನ ಊರಲ್ಲ, ನಾ ಅಲ್ಲಿ ಹೋಗುವನಲ್ಲ,
ಎಂದು ನಿಶ್ಚಯಿಸಿದೆನು. ನಮ್ಮ ಕೂಟದ ಜನಕೆ

ಹಿರಿಯರಾಗಿರುವ ತಮ್ಮಲಿ ಬಂದು ಅಡಿಮುಟ್ಟಿ,
ಇನಿಯಳಿಗೆ ಸಲುವ ಅಪರ ಕ್ರಿಯೆಗಳನು ಸಲಿಸಿ
ಸಂನ್ಯಾಸಕೊಳ್ಳುವುದು, ಎಂದು ಮನಮಾಡಿದೆನು.
ಇತ್ತ ಬಂದೆನು. ತಮ್ಮ ಪಾದವನು ಮುಟ್ಟಿಹೆನು.
ಮಗುವೆಂದು ನನ್ನ ಸಲಹಿರಿ ಎಂದು ಬೇಡುವೆನು.

ಭಟ್ಟ

ಬಹು ಕಿರಿಯ ಹರೆಯದಲಿ ಬಹು ಹಿರಿಯ ದುಃಖಕೆ
ಈಡಾದಿರಹುದು. ಆದರೆ ರಂಗನಾಥನೇ
ಕೋದಂಡರಾಮ. ಆವನು ಅಲ್ಲಿ ಆತನೇ
ಇಲ್ಲಿ ಸಹ. ಇಂಥ ದುಃಸಹ ದುಃಖದಲಿ ನಿಮ್ಮ
ಚೇತನವ ಬೇಯಿಸಿಹ ದೈವ ಇಂತದಕೆ ಈ
ಪುಟವಿಟ್ಟು ಯಾವ ಆಭರಣ ಮಾಡುವ ಎಂದು
ಎಣಿಸಿದೆಯೊ ಎಂತು ಹೇಳುವುದು. ದುಃಖವನಿತ್ತ
ದೈವ ಬಲ್ಲುದು ನಿಮಗೆ ಅದನು ಸಹಿಸುವ ಶಕ್ತಿ
ಇಲ್ಲೆಂದು. ಎಂದೆ, ಸೀವದ ಕುರಿತು ನುಡಿಯುತಿಹ
ಕೆಡುನುಡಿಯ ಕೇಳಿ ಕನಲದೆ, ತರಳ ಕೋಪದಲಿ
ನುಡಿದಿರುವನೆನುತ ಸೈರಣೆಯಿಂದ ಕಾಯುವುದು.
ತಾನು ಬಯಸಿದ ವಸ್ತು ಏನೊ ದೊರೆಯದೆ ಇರಲು,
ತಾಯ ಕೈಯೊಳಗಿರುವ ಮಗು ಕನಲಿ ಮೊರೆದಳುತ,
ಹೋಗಮ್ಮ ಹೋಗಮ್ಮ ಎಂದವಳ ಹೊಡೆಯುವುದು.
ನಮ್ಮಾಸೆ ಸಲ್ಲದೇ ನಾವು ದೇವರ ಇಂತೆ,
ಒಲ್ಲೆವೆಂಬೆವು, ಜರೆದು ಮೊರೆದು ಕೂಗಾಡುವೆವು.
ಶ್ರೀರಂಗ ಪುರವಾಸಿ ಕೋದಂಡರಾಮ ತಾ
ನಿಮ್ಮ ರಕ್ಷಿಸಲೆಂದು ಹರಸುವೆನು.

ತರುಣ

ವಂದನೆ

ತಂದೆ, ವಂದನೆ. ಮತ್ತೆ ಮತ್ತೆ ವಂದನೆ ನಿಮಗೆ.
ನನಗೆ ಮುಂದಿನ ದಾರಿಯನು ತೋರಿ ಸಲಹಿರಿ.

ಭಟ್ಟ

ನನಗೆ ತೋರುವ ಮಾತನರುಹುವೆನು. ಅದರಲಿ
ನಿಮಗೆ ಸರಿಯೆಂಬುದು ಕಂಡುದ ನೀವು ಮಾಡಿರಿ.
ಇದುವೆ ಕ್ರಮ.

ತರುಣ

ಅಪ್ಪಣೆ. ಒಂದರಿಕೆ. ಮಗು ನನ್ನ
ತಂದೆ ಬಹುವಚನದಲಿ ನುಡಿಸುವುದು ಈ ಕಿವಿಗೆ
ಬೇಡವೆನಿಸಿದೆ. ಅನುಗ್ರಹಮಾಡಿ ಮಗುವನು
ಮಗುವೆಂದು ಕಾಣಿರಿ.

ಭಟ್ಟ

ಆಯ್ತು, ಮಗು, ಕಾಣುವೆನು.
ದುಃಖದಲಿ ಬೆಂದು, ಇದೆ ಈಗ ಬಂದಿಹ ನಿನಗೆ
ನಿನ್ನ ದುಃಖದ ಕತೆಯ ಕೇಳಿ ನಾ ದುಃಖಿಸುತ
ಈ ಕ್ಷಣವೆ ದಾರಿ ತೋರುವೆನೆನ್ನುವುದು ಒಂದು
ಸಾಹಸದ ನಡೆಯಹುದು. ಒಂದು ದಿನ ತಡೆದುಕೊ.
ಕೋದಂಡರಾಮನಡಿಯಲಿ ಕುಳಿತು ಈ ದಿವಸ
ಏನನೊ ಯೋಚನೆಮಾಡಿ ಯಾವ ಪರಿ ಸರಿಯಹುದು
ಅದ ಅರಿತುಕೊಂಬೆನು. ನಾಳೆ ಇದೆ ವೇಳೆಗೆ
ಮತ್ತೆ ಈ ಮಾತನಾಡುವ.

ತರುಣ

ಅನುಗ್ರಹ, ತಂದೆ.

## ಸ್ಥಾನ ೨

(ಮಾರನೆಯ ದಿನ. ಅದೇ ಸ್ಥಳ. ಭಟ್ಟರು, ತರುಣ.)

ಭಟ್ಟ

ಒಂದು ದಿನವೆಲ್ಲ ಯೋಚಿಸಿ ನನಗೆ ತೋರುತಿದೆ
ನೀನು ಊರಿಗೆ ಹೋಗಿ ಸತಿಯಾದವಳ ಕುರಿತ
ಕರ್ಮಗಳನಲ್ಲಿಯೇ ನಡೆಸುವುದು ಸರಿಯೆಂದು.

ತರುಣ

ತಂದೆ ನನ್ನನು ಮನ್ನಿಸಿರಿ. ತಮ್ಮನೆಲ್ಲರನು
ಒಲ್ಲೆನೆಂದವಳು ಸತ್ತಿರೆ ಅವಳ ಕರ್ಮವನು
ಅವಳೊಲಿದ ನಾನು ಮಾಡುವುದ ನೋಡುತ ಇವರು
ಎಂಥೆಂಥ ಮಾತುಗಳನಾಡುವರು ಇದ ನಾನು
ಊಹಿಸಲು ಬಲ್ಲೆನು. ಇವರ ಇಂತಹ ಮಾತ
ನಾ ಕೇಳಿ ಸಹಿಸಲಾರೆನು.

ಭಟ್ಟ

ಅಂತೆ?

ತರುಣ

ಅಂತೆ ಸರಿ.
ನಾ ಇನ್ನು ಆ ಜನಕೆ ಮುಖವ ತೋರಿಸಲಾರ.

ಭಟ್ಟ

ಆಯ್ತು. ಇಲ್ಲಿಯೆ ನಿಲ್ಲಬಹುದು. ಈ ಕ್ಷೇತ್ರದಲಿ
ನನಗೆ ನೆರವಾಗಿ ದೇವರ ಸೇವೆಯಲಿ ತೊಡಗಿ
ಬಾಳ ಸಾರ್ಥಕ ಮಾಡಬಹುದು.

ತರುಣ

ಸಂನ್ಯಾಸದಲಿ
ಈ ಸೇವೆಯನೆ ಸಲ್ಲಿಸುವ ಎಂದು ನನ್ನಾಸೆ.

ಭಟ್ಟ

ಸೇವೆ ಸಲ್ಲಿಸುವುದಕೆ ಸಂನ್ಯಾಸವೇ ಬೇಕು
ಎಂಬುದೇನೂ ಇಲ್ಲ. ನೀ ಹಿರಿಯನೆಂಬ ನಾ
ಸಂನ್ಯಾಸಿಯಲ್ಲ.

ತರುಣ

ಸಂನ್ಯಾಸಿಯಲ್ಲವೆ? ಅದಕೆ
ನೂರುಮಡಿ. ನಿಮ್ಮ ಹದ ನಮ್ಮಂಥವರಿಗಳವೆ?
ಹುಟ್ಟು ವೈರಾಗ್ಯ ತಮ್ಮದು. ನನ್ನ ವೈರಾಗ್ಯ
ಬಾಳ ಬೇಸರದಿಂದ ಬಂದಿಹುದು. ನನ್ನಂಥ
ಜನ, ಇನ್ನು ಬಾಳು ಬೇಡೆಂಬವರು, ಉದ್ದೇಶ
ಫಲಿಸಬೇಕೆನಲು ಸಂನ್ಯಾಸವನು ವರಿಸಿಯೇ
ಮುಂದರಿಯಬಹುದು. ನಾ ಮನಮಾಡಿ ಮುಗಿಸಿಹೆನು.
ನನಗೆ ಸಂನ್ಯಾಸವನನುಗ್ರಹಿಸಿ ಸಲಹಿರಿ.
ಇದ ನಾನು ನನ್ನ ಇನಿಯಳ ಒಲವ ನೆನವಿಗೆ
ಕಿರಿಯ ಕಾಣಿಕೆ ಒಂದು ಎಂದು ನೀಡುತಲಿಹೆನು.
ನನ್ನೊಲವಿನೀ ಪರಿಯ ಕಂಡು ಅಲ್ಲವಳಾತ್ಮ
ಸಂತಸವ ಕಾಣುವುದು.

ಭಟ್ಟ

ಬೇಡ ಎಂಬೆನು ನಾನು.

ತರುಣ

ಇಲ್ಲ. ಮಗು ನನಗನುಗ್ರಹ ಇವನು ತೋರಿಯೇ
ನನ್ನ ರಕ್ಷಿಸಬೇಕು.

ಭಟ್ಟ

ಒಳಿತಣ್ಣ. ನಿನ್ನ ಮನ
ಅಂತು ಹರಿಯುತಲಿರಲು ಆ ಹರಿವ ತಡೆಯುವುದು
ನನ್ನೊಳನುಚಿತವೆ ಆದೀತು. ನಭದಿಂದಿಳಿದ
ನೀರು ನೂರೊಂದು ಮುಖವಾಗಿ ಹರಿಯುವ ರೀತಿ
ನರರ ಮನ, ಅವರವರ ಅವತಾರದೆಡೆ, ಅವರ
ಜೀವನದ ಪರಿಸರವನನುಸರಿಸಿ ಹರಿಯುವುದು.
ಒಂದೊಂದು ಬೊಗಸೆ ನೀರಿಗು ಬೇರೆ ಪಥವೆಂತು
ಅಂತು ಒಂದೊಂದು ಜೀವಕು ಬೇರೆ ಪಥವಿಹುದು.
ಸಂನ್ಯಾಸ ಆಗಲೇಬೇಕೆನಲು ಆಗಲಿ.
ಇನಿತೆ. ಬೇಸರದ ಉದ್ವೇಗದೀ ಕ್ಷಣದಲೇ
ಅದನು ಹಿಡಿವುದು ಬೇಡ. ಎರಡು ತಿಂಗಳ ದಿವಸ
ಕಳೆಯಲಿ. ಆ ಮಧ್ಯೆ ನೀನು ಕಾಂಚೀಪುರಕೆ
ತಿರುಪತಿಗೆ ಹೋದವನು ಕರಿರಾಜವರದನನು
ಶ್ರೀನಿವಾಸನನು ಪೂಜಿಸಿ ಇತ್ತ ಹಿಂತಿರುಗು:
ಕೋದಂಡರಾಮ ಆ ಕ್ಷೇತ್ರಗಳೊಳಳವಟ್ಟ
ದಿವ್ಯಮಂಗಳ ವಿಗ್ರಹಗಳು ಅವ ಕಣ್ತುಂಬ
ನೋಡಿ ನಿನ್ನಯ ಮನವನಾ ದಿವ್ಯ ದೇಶಗಳ
ಶಾಂತಿ ಆವರಿಸಿ ಚೇತನ ಸಮಾಧಾನದಲಿ
ಆಳಿರಲಿ. ಆಗ ಸಂನ್ಯಾಸವನು ಕೊಳುವುದು
ಯುಕ್ತವಪ್ಪುದು. ಇಂತುಮಾಡು. ಏನೆಂಬೆ?

ತರುಣ

ಹಿರಿಯರಪ್ಪಣೆ ಅಲ್ಲದಿರೆ ಇದನು ನನ್ನ ಮನ
ಬರಿದೆ ಕಾಲವ ಕಳೆದ ಪರಿ ಎಂದು ಎಣಿಸೀತು.
ಸಂನ್ಯಾಸಿಯಾಗುವುದು ನನ್ನ ದೃಢ ನಿಶ್ಚಯ.
ಇರುತ ತಮ್ಮಾಜ್ಞೆಯೆಂದೇ ಕ್ಷೇತ್ರಯಾತ್ರೆಯನು

ನಡೆಸಿ ಬರುವೆನು. ದೇವರಾಜ ವೇಂಕಟನಾಥ
ನನಗೆ ಶುಭ ದರ್ಶನವ ನೀಡಿ ಕರುಣಿಸುವಂತೆ
ತಾವು ಪ್ರಾರ್ಥನೆಯ ಸಲ್ಲಿಸಿ ನಿಮ್ಮ ಮಗು ನನ್ನ
ಕಾಪಾಡಿಕೊಳ್ಳಿರಿ. ನಾ ಹೋಗಿ ಬರುವೆನು ;
ನನಗೆ ಅಪ್ಪಣೆ ಕೊಡಿರಿ.

ಭಟ್ಟ

ಶುಭಮಸ್ತು, ಹೋಗಿ ಬಾ.
ಕೋದಂಡರಾಮ ನಿನ್ನನು ಸದಾ ರಕ್ಷಿಸಲಿ.

## ಸ್ಥಾನ ೩

(ಅದೇ ಸ್ಥಳ. ಹದಿನೈದು ದಿನದ ನಂತರ.)

ಭಟ್ಟ

ತರುಣ ಮುನ್ನಾರ್ ಕ್ಷೇತ್ರಯಾತ್ರೆಗೆಂದಡಿಬೆಳೆಸಿ
ಹದಿನೈದು ದಿನ ಇಂದು. ಕಂಚಿ ಸೇವೆಯ ಮುಗಿಸಿ
ಈ ದಿನಕೆ ಶೇಷಶೈಲವ ಕುರಿತು ಅಲ್ಲಿಂದ
ಹೊರಟಿರುವನಪ್ಪುದು. ತರುಣನದು ದೃಢಕಾಯ ;
ಅಂತೆ ದೃಢ ಮನ. ತೀರ ದೃಢ.

(ಅಂದು ಮುನ್ನಾರ್ ಕಂಡಂತೆ ಇಂದು ಆ ದೂರದಲ್ಲಿ ಇಬ್ಬರು ಸ್ತ್ರೀಯರು ಕಾಣುತ್ತಾರೆ. ಒಬ್ಬಾಕೆ ಹಿರಿಯಳು ; ಎರಡನೆಯವಳು ತರುಣಿ.)

ಯಾರು ದೇವಿಯರು
ಇತ್ತ ಸಾರುತಲಿಹರು ? ಚಿಂತೆಯಲಿ ಕಾದಿಹರು.

(ಸ್ತ್ರೀಯರು ಹತ್ತಿರ ಬರುವರು
ಬರುತ್ತಿರುವಂತೆ ಕೈ ಮುಗಿದು ಬಾಗುವರು.)

ಕೈಮುಗಿದು ಬಾಗುತಿರುವರು. (ಅವರನ್ನು ಕುರಿತು) ಬನ್ನಿ ತಾಯಿದಿರೆ;
ದೈವ ನಿಮ್ಮನು ರಕ್ಷಿಸಲಿ, ಬನ್ನಿ. ಬನ್ನಿರಿ.
ಮರ್ಯಾದೆ ತೋರಿದುದು ಸಾಕು. ಬಿಡಿ. ಕುಳ್ಳಿರಿ.
ಯಾರು, ಸಂಗತಿಯೇನು? ಹೇಳಿರಿ.

ಹಿರಿಯ

ಅಣ್ಣಲೇ
ನಾನೊಬ್ಬ ದುರ್ದೈವಿ ತಾಯಿ. ಈ ಮಗು ಇವಳು
ನನ್ನ ದುರ್ಭಾಗ್ಯ ಗರ್ಭದಲಿ ಜನ್ಮವ ತಳೆದ
ದುರ್ದೈವಿ ಮಗಳು.

ಭಟ್ಟ

ಅವ್ವಾ ನೀವು ದುರ್ದೈವಿ
ದುರ್ದೈವಿ ಎಂದು ನಿಮ್ಮನೆ ಹಳಿದುಕೊಂಬುದು
ದುಃಖದುದ್ವೇಗದಲಿ ಸಹಜ. ಆದರೆ ಅಂತೆ
ಹುರುಳಿಲ್ಲದುಲಿವು. ಜೀವವ ದೈವ ಬಾಳಿನಲಿ
ನಡೆಸುತಿದೆ. ನೆರಳು ತುಸ, ಬೇಗೆ ತುಸ; ಎರಡನೂ
ದೈವ ಕೊಡುವುದು. ಸಹಿಸಿಕೊಳ್ಳಿರಿ.

ಹಿರಿಯ

ನಾನೆಂತೊ
ಸಹಿಸಿಕೊಂಡೇನು. ಸಹಿಸುವುದೆಂತು ಇವಳಿಗೆ
ಕಲಿಸಿ ರಕ್ಷಿಸಿರಿ. ಕಲಿಸುವಿರಿ ಎಂದೇ ನಂಬಿ
ಇವಳನಿಲ್ಲಿಗೆ ಕರೆದು ತಂದಿಹೆನು. "ನಮ್ಮ ಕುಲ
ಎಲ್ಲಕೂ ಈ ದಿವಸ ತಾಯ್ತಂದೆ ಗುರುವಾಗಿ

ನಿತ್ಯರಕ್ಷಕಸತ್ವವಾಗಿ ಭಟ್ಟರು ಇಹರು,
ಅವರ ಕಾಲಲಿ ಕೆಡೆದು ಅವರೆಂತು ಬೆಸಸುವರು
ಅಂತು ನಡೆಯುವೆಯಂತೆ ಬಾ," ಎಂದು ಒಪ್ಪಿಸಿ
ಇವಳೊಡನೆ ಇತ್ತ ಬಂದೆನು. ಅನುಗ್ರಹಮಾಡಿ
ಇವಳ ಕಾಪಾಡಿ.

ಭಟ್ಟ

ಸಂಗತಿಯೇನು ತಿಳಿಸಿರಿ.

ಹಿರಿಯ

ಅಣ್ಣಲೇ ನಮ್ಮೂರು ಶ್ರೀರಂಗ. ನಮ್ಮ ಮನೆ
ಒಂದು ಕಾಲದಲಿ ಸಿರಿವಂತ ಮನೆಯಾಗಿತ್ತು.
ಈ ನಮ್ಮ ದಿನಕೆ ಬಡವಾಗಿಹುದು.

ಭಟ್ಟ

ನೆರಳಿನಿಸು.
ಬಿಸಿಲಿನಿಸು. ಇದೆ ದಾರಿ. ಒಬ್ಬನಿಗೆ ಎಂತಂತೆ
ಮನೆಗೆ ಸಹ.

ಹಿರಿಯ

ಸತ್ಯ, ಅಣ್ಣಲೆ. ನಮಗೆ ಒಬ್ಬಳೇ
ಮಗಳಿವಳು. ಕಡುಚೆಲುವೆ. ನೀವೆ ನೋಡುತಲಿಹಿರಿ.

ಭಟ್ಟ

ಸೀತಾಪಿರಾಟ್ಟಿ ಇಂತಿದ್ದಳೆನೆ ಸಲ್ಲುವುದು.
ದೈವ ಇವಳನು ರಕ್ಷಿಸಲಿ.

ಹಿರಿಯ

ನಿಮ್ಮ ಹರಕೆ ಇದು
ದೈವಕೃಪೆಯಿಂದ ಫಲಿಸಲಿ. ನಾವು ಬಡವರೇ,

ಸರಿಯಾದ ಒಬ್ಬ ವರ ಇವಳ ಕೈಹಿಡಿದಾನೆ,
ಎಂದವಳ ತಾಯಾದ ನಾನು ಚಿಂತಿಸುತಿರಲು
ಎಳೆತನದ ಇವಳ ಸಂಗಾತಿ ಹರೆಯದ ಹುಡುಗ....

ಭಟ್ಟ

(ತನ್ನಷ್ಟಕ್ಕೆ) ಮನ್ನಾರೊ?

ಹಿರಿಯ

ಏನು? ಮನ್ನಾರ್ ಎಂದಿರಾ? ನಮ್ಮ
ಕಥೆ ಇಷ್ಟು ಬೇಗದಲಿ ತಮ್ಮ ಕಿವಿ ಮುಟ್ಟಿತೇ?
ಇವಳು ಅವನನೆ ಮದುವೆಯಾಗುವೆನು ಎಂದುದು,
ಅವನು ಇವಳನು ಒಪ್ಪಿಕೊಂಡು ಹಸೆ ನಿಂದುದು,
ಜನಜನಿತ ಕಥೆಯಾಯ್ತು. ಚೆಲುವೆ ಇವಳನು ತಾವು
ಮದುವೆಯಾಗುವ ಎಂದು ಬಯಸಿದ್ದ ಸಿರಿವಂತ
ಜನ ಇವರನಪಹಾಸ್ಯಮಾಡಿ ನಾಡಿನ ತುಂಬ
ನಗೆ ಮಾತ ಹರಡಿದರು. ಅದು ನಿಮ್ಮ ಮುಟ್ಟಿರಲು
ನಮಗೆ ಅಚ್ಚರಿಯಲ್ಲ.

ಭಟ್ಟ

ಜನ ನುಡಿದ ನಗೆ ಮಾತು
ಅಲ್ಲ ನನಗೇನನೇ ತಿಳಿಸಿದುದು. ನಿಮ್ಮಳಿಯ
ನನ್ನ ಮನ್ನಾರ್ ಅಹುದೆ, ನಾನು ಇದ ಕಾಣೆನು.
ನನ್ನ ಮನ್ನಾರ್ ಹೆಂಡಿರನು ಕಳೆದುಕೊಂಡಿಹನು.

ಹಿರಿಯ

ಅವನಾರೊ ಬೇರೆ. ನಮ್ಮಳಿಯ ಮನ್ನಾರ್ ಈಗ
ಮೂರು ತಿಂಗಳ ಹಿಂದೆ ಪದ್ಮನಾಭನ ಪುರಕೆ
ಯಾತ್ರೆ ಹೋದವನು ಅಲ್ಲಿಯೆ ತೀರಿಕೊಂಡನು.

ಭಟ್ಟ

ನನ್ನ ಮನ್ನಾರ್ ಅಂತೆ ಪದ್ಮನಾಭನಪುರಕೆ
ಯಾತ್ರೆ ಹೋಗಿದ್ದವನು ತನ್ನಿನಿಯೆ ಅತ್ತುಳಾಯ್....

ಹಿರಿಯೆ

ಅತ್ತುಳಾಯ್ ?

ಭಟ್ಟ

ಅತ್ತುಳಾಯ್.

ಹಿರಿಯೆ

ಈ ನನ್ನ ಮಗಳಿವಳು
ಅತ್ತುಳಾಯ್.

ಭಟ್ಟ

ಅಂತೆಂಬಿರಾ ?

ಹಿರಿಯೆ

ರಂಗಪುರದಿಂದ
ಪದ್ಮನಾಭನಪುರಕೆ ಯಾತ್ರೆ ಹೊರಟವರಲ್ಲಿ
ಅತ್ತುಳಾಯ್ ಎಂಬವಳ ಗಂಡ ಮನ್ನಾರ್ ಎಂಬ
ತರುಣರಿಬ್ಬರು ಉಂಟೆ ?

ತರುಣಿ

ಇಲ್ಲಮ್ಮ ಇಲ್ಲ. ಇರು.
ಅತ್ತುಳಾಯ್ ಮಾತೇನು ಅಪ್ಪ ಕೇಳಿಸಲಿ.

ಭಟ್ಟ

ಅವಳು
ಕಾವೇರಿಯಲಿ ಕಾಲು ಜಾರಿ ಹೊಳೆಯಲಿ ಕೊಚ್ಚಿ
ಹೋದವಳು ತೀರಿಕೊಂಡಳು ಎಂದು ಮೂರು ದಿನ

ತಡೆದು ಶ್ರೀರಂಗಪುರದಿಂದ ಬಂದೊಬ್ಬರು
ಮನ್ನಾರ ಗೆಳೆಯ ಗೋಪಾಲನಿಗೆ ಹೇಳಿದರು.
ಗೋಪಾಲನಿಂದ ಮನ್ನಾರ್ ಅದನು ತಿಳಿದನು.
ಇಂಥ ಹೆಂಡಿರ ಕಳೆದುಕೊಂಡು ನಾ ಊರಿನಲಿ
ಮುಖವ ತೋರಿಸಲಾರೆನೆಂದು ವೈರಾಗ್ಯದಲಿ
ಇತ್ತ ಬಂದನು. ಈಗ ಹತ್ತು ದಿವಸಕೆ ಹಿಂದೆ
ನನ್ನ ಕಂಡನು. ತಾನು ಸಂನ್ಯಾಸಿಯಾಗುವೆನು
ಎಂದು ಹೇಳಿದನು.

ಹಿರಿಯೆ

ಪಾಪಿಷ್ಠ ದುಷ್ಟರು ಇವರು,
ತಮ್ಮಾಸೆ ಕೆಡಿಸಿದೀ ಹುಡುಗ ಹುಡುಗಿಯ ಮೇಲೆ
ಹೊಟ್ಟೆಯುರಿಯಿಂದ ಈ ಸುಳ್ಳು ಕತೆಯನು ಕಟ್ಟಿ
ಇಲ್ಲಿ ಇವಳಿಗೆ ಅವನು ಅಲ್ಲಿ ಸತ್ತನು ಎಂದು
ಅಲ್ಲಿ ಅವನಿಗೆ ಇವಳು ಇಲ್ಲಿ ಸತ್ತಳು ಎಂದು
ಸುದ್ದಿ ಮುಟ್ಟಿಸಿ, ಇಬ್ಬರೂ ದುಃಖಪಡುವುದನು,
ನೋಡಿ ಸಂತೋಷಪಡಬಯಸಿದರು. ಪಾಪಿಗಳೆ
ದೈವ ನಿಮ್ಮನು ನೋಡಿಕೊಂಬುದು.

ತರುಣಿ

ಆ ಮೊದಲು
ದೈವ ನಮ್ಮನು ನೋಡಿಕೊಳಲಿ, ಇದ ಬೇಡಮ್ಮ.
ಅಪ್ಪನವರಡಿಯ ನೆರಳನು ಬಯಸಿ ಬಂದವರು
ಈಗೆಲ್ಲಿ? ತಿಳಿಯಬೇಕಲ್ಲ.

ಭಟ್ಟ

ಚೆಲುವಾದ ನುಡಿ,
ಚೆಲುವಾದ ನಡೆ, ತೀರ ಚೆಲುವಾದ ಮನದೆಣಿಕೆ

ಮಗು ನನ್ನ ಆತ್ತುಳಾಯ್. ನಿನ್ನರಸ ಸಂನ್ಯಾಸ
ಬಯಸಿರಲು ನಾನವನ, ಕಂಚಿ ಶೇಷಾಚಲದ
ಯಾತ್ರೆಯನು ನಡೆಸಿ ಬಾ ಆ ಮೇಲೆ ಸಂನ್ಯಾಸ
ಎಂದು, ಯಾತ್ರೆಗೆ ಕಳುಹಿಸಿದೆನು. ತಿಂಗಳ ದಿವಸ
ಕಳೆದಿರಲು ಅವನು ಹಿಂತಿರುಗುವನು. ಹೆಂಡಿರು
ತೀರಿಕೊಂಡಳು ಎಂಬ ತಪ್ಪು ತಿಳಿವಳಿಕೆಯಲಿ
ಸಂನ್ಯಾಸವೆಂದುಕೊಂಡವನು ಆ ತಿಳಿವಳಿಕೆ
ತಪ್ಪಾಯಿತೆಂಬುದನು ಕಾಣುವನು. ಇನಿಯಳನು
ಸೇರಿ ಊರನು ಸಾರಿ ಸುಳ್ಳಾಡಿ ನುಡಿದವರು
ನಾಚುವಂದದಿ ಚೆನ್ನ ಬಾಳುವನು. ಬರುವವನ
ಎದುರುಗೊಳ್ಳಲು ಇಲ್ಲೆ ನಿಲ್ಲಿರಿ. ಬಂದವನ
ಜೊತೆಗೆ ಒಯ್ಯುವಿರಂತೆ.

ತರುಣಿ

ಅಪ್ಪನವರೀ ಹರಕೆ
ದೈವಕೃಪೆಯಿಂದ ಸಲ್ಲಲಿ.

ಹಿರಿಯ

ಸಲ್ಲಲೆನ್ನಿರಿ,
ಅಣ್ಣಲೇ; ಎಂದು ಈ ಮಗುವ ಸಂರಕ್ಷಿಸಿರಿ.

## ಸ್ಥಾನ ೪

(ಅದೇ ಸ್ಥಳ. ಎರಡು ತಿಂಗಳ ನಂತರ. ಭಟ್ಟ, ತಾಯಿ, ನಿಂತಿದಾರೆ.)

ಭಟ್ಟ

ನಮ್ಮ ಮನ್ನಾರ್ ಕ್ಷೇತ್ರಯಾತ್ರೆಯಲಿ ತೊಡಗಿದುದು
ಮೂರು ತಿಂಗಳ ಹಿಂದೆ ಇದೆ ಪಂಚಮಿಯ ದಿವಸ.
ಈ ವೇಳೆಗವನು ಹಿಂದಿರುಗಬೇಕಿದ್ದಿತು.

ಹಿರಿಯ

ದಿನ ಹಿಂಚು ಮುಂಚು. ನಿಮ್ಮಾಜ್ಞೆಯಲಿ ನಡೆದವನು
ಸುಖವಾಗಿ ಮರಳುವನು. ಮರಳಿ ಬಹ ದಿವಸ ಇವು
ಎಂದೆ ನಮ್ಮತ್ತುಳಾಯ್ ಮಂದಿರದ ಅಂಗಳವ,
ಅಂತೆ ಈ ಮುತ್ತದಂಬಲವ, ತಾ ಕಲಿತಿಲ್ಲ
ರಂಗವಲ್ಲಿಯ ಚಿತ್ರದಿಂದ ತುಂಬುತಲಿಹಳು.

ಭಟ್ಟ

ಅವಳ ಈ ರಂಗವಲ್ಲಿಯ ಚೆಲುವು ಕಡು ಚೆಲುವು.
ಇದನು ಮನ್ನಾರ್ ಮೆಚ್ಚಿಕೊಂಡಿಹನು ಎಂಬಿರಿ,
ಅಲ್ಲ ?

ಹಿರಿಯ

ಇವಳಿಗೆ ಇವನು ಬರೆಯುವುದು ಸಂತೋಷ.
ಇವ ನೋಡುವುದು ಅದಕು ಮಿಗಿಲವನ ಸಂತೋಷ;
ಅಂತೆ ತುಂಬಿದ ಒಂದು ಹೆಮ್ಮೆ. ನಮ್ಮೂರಿನಲಿ
ಆಲಯದ ಉತ್ಸವದ ದಿನದಿನದ ಮಂಟಪದ
ಮಧ್ಯೆ ಇವಳೆನಿತೊ ದಿನ ರಂಗವಲ್ಲಿಯ ಸೇವೆ
ಸಲಿಸುವಳು. ಆಗವನು ಬಳಿಯಲೇ ಸುಳಿಯುತ್ತ
ಇವಳು ಬರೆವುದನು ನೋಡುತ ಹೊತ್ತ ಕಳೆವನು.
ಇಷ್ಟರಿಗೆ ಇವರ ಈ ಒಲವ ಪರಿಯನು ನೋಡಿ
ಸಂತೋಷ. ಆಗದವರಿಗೆ ಒಂದು ನಗೆ ಪಾಡು.

ಭಟ್ಟ

ಅತ್ತುಳಾಯ್ ನಾಚಳೇ ?

ಹಿರಿಯ

ನಾಚುವಳು, ತುಸು ; ಮತ್ತೆ
"ಇವರ ಮೆಚ್ಚಿಸುವೆವೆನೆ ಗಂಡ ಹೆಂಡಿರು ನಾವು

ದಿನಬಿಡದೆ ಕಾದಾಡಬೇಕು. ಕಾದುವುದೆಂತು ?
ಇವರಿಂದಲೇ ಕಲಿಯಬೇಕು. ನಮಗಿದು ಬೇಡ.
ನಮಗೆ ತೋಚಿದ ರೀತಿ ನಾವು ಬಾಳುತಲಿಹೆವು,
ನಾಲ್ಕುದಿನ ಕಳೆಯಲಿವರಿದನೊಪ್ಪಿಕೊಂಬರು,"
ಎನ್ನುವಳು. ಇವರಿವರ ಸಲಿಗೆ ಈ ಪರಿಯಿತ್ತು:
ಎಳೆಯರಾಟದಲಿ ಮನ್ನಾರ್ ಅತ್ತುಳಾಯ್ ಎಂದು
ಒಬ್ಬರೊಬ್ಬರ ಕರೆಯುತಿದ್ದಂತೆ ಇಬ್ಬರೂ
ಮದುವೆಯಾಗಿಯು, ಗಂಡ ಹೆಂಡಿರನು, ಹೆಂಡಿರು
ಗಂಡನನು, ಹೆಸರು ಹಿಡಿದೇ ಕರೆದುಕೊಂಬರು.
ಜನ ನಗರೆ ? ಅತ್ತುಳಾಯ್, ನಗಲಲ್ಲ ನಮಗೇನು,
ನಾವು ಯಾವುದೆ ಪಾತಕವ ಮಾಡುತಿಲ್ಲಲ್ಲ,
ಎನ್ನುವಳು.

ಭಟ್ಟ

ಸೀತಾಪಿರಾಟ್ಟಿ ಇಂತಹ ವೇಳೆ
ಇಂತೆ ನುಡಿಯುತಲಿದ್ದರೆಂದೆನಗೆ ತೋಚುತಿದೆ.
ಹೆಣ್ಣ ನಯ, ಅಂತೆ ಹೆಣ್ಣಿನ ದಿಟ್ಟತನ.

ಹಿರಿಯೆ

ಒಬ್ಬ
ತಂದೆ ಏನನು ಹೇಳಬಹುದು ಅದ ಹೇಳುವಿರಿ
ಇಂಥ ಹೊತ್ತಿಲ್ಲ ಅಣ್ಣಾಲ್. ಇತ್ತ ಬರುತಿಹಳು
ಅತ್ತುಳಾಯ್.

ಭಟ್ಟ

ನಾನು ತೀರ್ಥಕೆ ಹೋಗಿ ಬರುವೆನು.
(ಎಂದು ಹೊರಡುತ್ತಾನೆ, ಅತ್ತುಳಾಯ್ ಬರುತ್ತಾಳೆ.)

ಅತ್ತುಳಾಯ್

ಅಪ್ಪ ಮೀಯಲು ಹೋದರೇನಮ್ಮ ?

ಹಿರಿಯೆ

ಅಹುದಮ್ಮ.
ನಿನ್ನ ಈ ರಂಗವಲ್ಲಿಯ ತುಂಬ ಮೆಚ್ಚಿದರು.
ಮನ್ನಾರಿಗಿದು ತುಂಬ ಇಷ್ಟ ಎಂಬುದ ಕೇಳಿ
ತುಂಬ ಸಂತೋಷಪಟ್ಟರು.

ಅತ್ತುಳಾಯ್

ಅಳಿಯ ಬಂದಾಗ
ಇದ ನೋಡಿಯೇ ನಾನು ಜೀವಿಸಿಹೆನೆಂಬುದನು
ತಿಳಿದು ಸುಖ ಕಾಣುವರು.

ಹಿರಿಯೆ

ಕಾಣಲಮ್ಮಾ; ಕಂಡು
ನಮಗೆಲ್ಲ ಸುಖವ ನೀಡಲಿ. ಏನು ಇನ್ನನಿತು
ರಂಗವಲ್ಲಿಯನಿಕ್ಕುವೆಯ ? ಒಳಿತು ನಾ ಒಳಗೆ
ಕೆಲಸವೇನಿದೆ ನೋಡುವೆನು.

ಅತ್ತುಳಾಯ್

ಹೋಗಿ ನೋಡಮ್ಮ.
(ಎಂದು ರಂಗವಲ್ಲಿಯೊಂದನ್ನು ತಿದ್ದಲು ಕುಳಿತುಕೊಳ್ಳು ವಳು. ಕೆಲವು ಕ್ಷಣದಲ್ಲಿ ಸ್ವಲ್ಪ ದೂರದಲ್ಲಿ ಕಾವಿ ವಸ್ತ್ರದಲ್ಲಿ ಮನ್ನಾರ್ ಕಾಣುವನು. ಇವಳು ಅವನನ್ನು ಕಾಣುವಳು, ಆದರೆ ಅಷ್ಟಾಗಿ ಗಮನಿಸುವುದಿಲ್ಲ.)

ಸಂನ್ಯಾಸಿ ಯಾರೊ ಬರುತಿಹರು. ಅಪ್ಪಾ ಅವರ

ನೋಡ ಬರುತಿರಬೇಕು. ವಿಾಯ ಹೋಗಿರುವರು,
ಅತ್ತ ಹೋಗುವಿರ, ಬಹವರೆಗೆ ಕಾದಿರುವಿರಾ,
ಎಂದರಾಯಿತು.

(ಮನ್ನಾರ್ ದೂರದಲ್ಲಿ ನಿಲ್ಲುವನು. ನಿಂತು)

ಮನ್ನಾರ್

ಹರದೆ ಯಾರಿಲ್ಲಿ ? ಕುಳಿತಿಹ ರೀತಿ ಅತ್ತುಳಾಯ್
ಕುಳಿತ ತೆರನೇ ಇಹುದು. ಸಂನ್ಯಾಸಿ ಆದರೂ
ಅತ್ತುಳಾಯ್ ಭ್ರಮೆ ನನ್ನ ಬಿಡಲಿಲ್ಲ. ಅತ್ತುಳಾಯ್
ಸತ್ತು ನೂರಿಪ್ಪತ್ತು ದಿನ ಮುಗಿದಿರಲು ಇಂದು
ಹೆಣ್ಣಿವಳು ಕುಳಿತಿರುವ ತೆರ ನನಗೆ ಅತ್ತುಳಾಯ್
ತೆರನ ನೆನಪಿಗೆ ತರುತಲಿಹುದು. ಒಳ್ಳಿತು, ಹೋಗಿ
ಗುರು ಇಹರೆ ತಿಳಿಯುವ.

(ಎಂದು ಮುಂದರಿಯುವನು. ಅತ್ತುಳಾಯ್ ಎದ್ದು ಇವನತ್ತ
ತಿರುಗುವಳು. ತಕ್ಷಣ ಗುರುತಿಸುವಳು.)

ಅತ್ತುಳಾಯ್

ಮನ್ನಾರ್.

ಮನ್ನಾರ್

ಅತ್ತುಳಾಯ್.

ಜೀವಿಸಿಹೆಯೋ ಇಲ್ಲ ಇದು ನನ್ನ ಭ್ರಾಂತಿಯೋ ?

ಅತ್ತುಳಾಯ್

ಜೀವಿಸಿರುವೆನು. ನಿನ್ನ ವೇಷವನು ನೋಡುತಿರೆ
ಸತ್ತಿರಲು ಚೆನ್ನಿತ್ತು ಎನಿಸುತಿದೆ. ಏನು ಇದು ?

ಮನ್ನಾರ್

ನಾನೀಗ ಸಂನ್ಯಾಸಿ.

ಅತ್ತುಳಾಯ್

ಸಂನ್ಯಾಸಿ ಎಂತಾದೆ ?
ಅಪ್ಪ ಹೇಳಿದರಂತೆ, ಕ್ಷೇತ್ರಯಾತ್ರೆಯ ಮುಗಿಸಿ
ಹಿಂದಿರುಗಿ ಬಳಿಕ ಸಂನ್ಯಾಸ ಕೊಂಬುದು ಎಂದು.

ಮನ್ನಾರ್

ಅಪ್ಪ ? ಗುರು, ಭಟ್ಟರು ?

ಅತ್ತುಳಾಯ್

ಅಹುದು ; ಭಟ್ಟರು ; ಅಪ್ಪ.

ಮನ್ನಾರ್

ಅವರ ಮಾತನು ಮೀರಿದೆನು. ಹೊರಟ ಪಕ್ಷದಲಿ
ಕಂಚಿಯಲಿ ಸಂಪ್ರದಾಯದ ಹಿರಿಯ ಸಂನ್ಯಾಸಿ
ಒಬ್ಬರಿದ್ದುದ ಕಂಡು, ಇಂದೇನು, ಎಂದೇನು,
ಎಂದವನು ಅವರಿಂದ ದೀಕ್ಷೆಯನು ಬೇಡಿದೆನು.
ಅವರು ಸಂಗತಿಯೆಲ್ಲವನು ಕೇಳಿ ಸಂನ್ಯಾಸ
ನೀಡಿದರು. ನಾನು ಕೊಂಡೆನು.

ಅತ್ತುಳಾಯ್

ಹೆಂಡಿರಾದವಳು
ಸತ್ತಿಹಳು ಎಂದು ಹಿರಿಯರ, ನಿನ್ನ, ತಿಳಿವಳಿಕೆ ?

ಮನ್ನಾರ್

ಅಹುದು.

ಅತ್ತುಳಾಯ್

ಸತ್ತಿಲ್ಲ ಹೆಂಡಿರು. ಈಗ ?

ಮನ್ನಾರ್

ಸಂನ್ಯಾಸ ಕೊಂಡಾಯ್ತು.

ಅತ್ತುಳಾಯ್

ಕೊಂಡಾಯ್ತು : ತಪ್ಪು ತಿಳಿವಳಿಕೆಯಲಿ.

ಮನ್ನಾರ್

ತಿಳಿವಳಿಕೆ ತಪ್ಪು ಎನ್ನುವುದು ತಿಳಿಯಿತು ಈಗ.

ಅತ್ತುಳಾಯ್

ಈಗ ಯಾವುದು ದಾರಿ ?

(ಒಳಗಿಂದ ಹಿರಿಯೆ ಬರುವಳು.)

ಹಿರಿಯೆ

ಯಾರೊಡನೆಯೇ ಮಾತು ?

ಮನ್ನಾರ್

ನಾನು, ಮನ್ನಾರ್, ಅತ್ತೆ.

ಹಿರಿಯೆ

ಮನ್ನಾರೆ ? ಸಂನ್ಯಾಸ ?

ಮನ್ನಾರ್

ಅಹುದು.

ಹಿರಿಯೆ

ಅಯ್ಯೋ, ಅನಾಹುತವೆ ! ಇನ್ನೇನು ಗತಿ ?

ಅತ್ತುಳಾಯ್

ನಾ ಪ್ರಾಣ ಬಿಡುವುದೇ ಗತಿ.

ಹಿರಿಯ

ಎಲೆ, ಎಲೇ ಎಲೇ
ತಲೆಹರಟೆ ಹುಡುಗಿ, ತೋಚಿದ ಎಲ್ಲ ಮಾತನೂ
ಆಡುವೆನು ಎನಬೇಡ. ಸಂನ್ಯಾಸ ಅಹುದಾಗೆ
ಅಪ್ಪ, ನೀವಿವಳೊಡನೆ ಮಾತಾಡಬಾರದು.
ಇವಳ ನೋಡುವುದೆ ಕೂಡದು. ಅತ್ತುಳಾಯ್ ನೀನು
ಒಳಗೆ ಹೋಗಮ್ಮ.

ಅತ್ತುಳಾಯ್

ಹೋಗುವೆನಮ್ಮ. ಶಾಸ್ತ್ರದಲಿ
ಏನೇನು ಹೇಳಿದೆಯೊ ಆ ಎಲ್ಲ ಅಶುಭವನು
ನಡೆಸಿಬಿಡು. (ಒಳಕ್ಕೆ ಹೋಗುವಳು.)

ಹಿರಿಯ

ಅಹುದಮ್ಮ. ನೀನು ಸುಖವಾಗಿರಲು
ನಾ ನೋಡಿ ಸಹಿಸಲಾರದೆ ಹೋದೆ. ಸಂನ್ಯಾಸ
ಹಿಂದಿರುಗಿ ಬಂದ ನಂತರ ಆಗುವುದು ಎಂದು
ತಿಳಿಸಿದ್ದೆನೆಂದರೇ ಹಿರಿಯರು ?

ಮನ್ನಾರ್

ಹೋಗುತ್ತ
ಅಂತೆಂದೆ ಹೋದೆ. ದಾರಿಯಲಿಂತು ದುಡುಕಿದೆ.

ಹಿರಿಯ

ಮುಂದೆ ?

ಮನ್ನಾರ್

ಮುಂದೇನು ? ಸಂನ್ಯಾಸವನು ಹಿಡಿದವನು
ನನ್ನ ದಾರಿಯ ಹಿಡಿದು ನನ್ನಂತೆ ಹೋಗುವೆನು.

ಹಿರಿಯ

ನಿನ್ನ ಕೈಹಿಡಿದವಳು ಇಹಳೆ, ಇವಳಿಗೆ ದಾರಿ ?

ಮನ್ನಾರ್

ನನ್ನ ಕೈಹಿಡಿದವಳು ಸಂನ್ಯಾಸಿ ಆದವನು
ಒಬ್ಬವನ ಹೆಂಡಿರಾಗಿದ್ದವಳ ರೀತಿಯಲಿ
ಬಾಳುವಳು.

ಹಿರಿಯ

ನುಡಿ ಸುಲಭ. ಬಾಳುವುದು ಸುಲಭವೇ ?
ಈ ಹುಡುಗಿ ಜೀವದೊಂದಿಗೆ ನಿಲ್ಲುವುದು ದಿಟವೆ ?
ಗಂಡ ಸತ್ತನು ಎಂದು ಸುದ್ದಿ ಬಂದಾದಿನವೆ
ಉಸಿರ ತೊರೆಯುವೆನೆಂದು ಹಟ ಮಾಡಿದಳು. ನಾನು
ಎಷ್ಟೋ ಸಮಾಧಾನ ಹೇಳಿ, ಹಿರಿಯರ ಕಂಡು
ನಿರ್ಣಯಿಸಿಕೊಂಬೆ, ಬಾರಮ್ಮ, ಎಂದಿವಳನು
ಅಣ್ಣಾಲವರೀಯೆಡೆಗೆ ಕರೆತಂದೆ. ಸಾವಲ್ಲ,
ಸಂನ್ಯಾಸ. ಇವಳ ಪಾಲಿಗೆ ಗಂಡ ಇನ್ನಿಲ್ಲ.
ಗಂಡನಿಲ್ಲದೆ ಇವಳು ಜೀವಿಸಿರುವವಳಲ್ಲ.

ಮನ್ನಾರ್

ಅದರ ಯೋಚನೆ ನನಗೆ ತರವಲ್ಲ.

(ಭಟ್ಟ ಬರುವನು.)

ಭಟ್ಟ

(ಇವನನ್ನು ನೋಡಿ ಧ್ವನಿ ಕೇಳಿ) ಸಂನ್ಯಾಸಿ
ಯಾರು ? ಮನ್ನಾರ್ ಧ್ವನಿ.
(ಮನ್ನಾರ್ ಅವನತ್ತ ತಿರುಗುವನು ; ಅವನನ್ನು ಗುರುತಿಸಿ)
ದೀಕ್ಷೆ ಕೊಂಡಿರ ಹೇಗೆ ?

ಮುನ್ನಾರ್

ಅಹುದು ; ಅಪ್ಪಣೆ ಮೀರಿದೆನು ; ದೀಕ್ಷೆ ಕೊಂಡೆನು.

ಭಟ್ಟ

ಸಂನ್ಯಾಸಿಗಳಿಗೆ ವಂದನೆ.

(ಎಂದು ದೀರ್ಘದಂಡ ನಮಸ್ಕಾರ ಮಾಡುವನು.)

ಮುನ್ನಾರ್

(ತಾನು ದಂಡಪ್ರಣಾಮ ಮಾಡಿ) ಅಯ್ಯೊ ಬೇಡ ಇದು.
ನಾನೆಲ್ಲಿ, ತಾವೆಲ್ಲಿ ?

ಭಟ್ಟ

ಮೊದಲಾಶ್ರಮದ ನಾನು
ಬ್ರಹ್ಮಚಾರಿ ದ್ವಿಜ, ತುರೀಯಾಶ್ರಮದ ತಮಗೆ
ನಮಿಸುವುದೆ ಕ್ರಮ. ತಾವು ನಮಿಸುವುದು ತಪ್ಪಲ್ಲ.
ನನ್ನ ಈ ನಮನ ನಿಮ್ಮಡಿ ಸಾರಿ ಅಲ್ಲಿಂದ
ನಿಮ್ಮ ನಮನದ ಜೊತೆಗೆ ಹಿಂದಿರುಗಿ ಇರ್ವರಿಗೆ
ನಡುವೆ ಬಿಜಗೆಯ್ದಿರುವ ಪರಮಾತ್ಮನಡಿಗಳನು
ಸಾರಿ ಎರಡೂ ಸಫಲವಾಗುವುವು. ಇವರ ಪರಿ
ಅತ್ತುಳಾಯ್ ತಾಯ್‌ಗೆ ತಿಳಿಯಿತೊ ?

(ಅತ್ತುಳಾಯ್ ಒಳಗಿಂದ ಬರುತ್ತಾ)

ಅತ್ತುಳಾಯ್

ಎಲ್ಲರಿಗು ಮೊದಲು
ಅದನು ಕಂಡವಳು ನಾನೇ ಅಪ್ಪ. ಕಂಡದ್ದೆ
ನಾ ಸತ್ತೆ. ಈಗ ನಿಮ್ಮೊಡನೆ ಮಾತಾಡುವುದು
ಅತ್ತುಳಾಯ್ ಹೆಣ.

ಹಿರಿಯ

ಎಲೇ ಹುಡುಗಿ, ಬಾಯಿಗೆ ಬಂದ
ಎಲ್ಲ ಮಾತನು ಆಡಿ ಮುಗಿಸದಿರು. ಅಣ್ಣಲೇ
ದುಃಖದಲಿ ಹುಡುಗಿ ಆಡುತಲಿರುವ ಈ ಮಾತ
ಹಿರಿಯರಾದವರು ಮನ್ನಿಸಿ ಇವರ ದಾಂಪತ್ಯ
ಸರಿಯಾಗಬಹುದೆಂತು ಎಂದು ಯೋಚಿಸಿ ನಮಗೆ
ದಾರಿ ಯಾವುದು ತೋರಬೇಕು. ಕಣ್ಣಿಗೆ ಕಂಡು,
ಕಿವಿಗೆ ಕೇಳುವ ನುಡಿಯ ನುಡಿದು, ಇವರನು ಪೊರೆವ
ಪ್ರತ್ಯಕ್ಷ ದೈವವಾಗಿಹಿರಿ. ತಿಳಿಯದ ಮಗಳ
ರಕ್ಷಿಸುವುದೆಂತು ಆರೈಸಿ ಸಂರಕ್ಷಿಸಿರಿ.

ಭಟ್ಟ

ಸಂನ್ಯಾಸ ಎಂದು ಬರೆದಾಯಿತೇ ಬರಹ ಅದ
ಅಳಿಸುವೆನು ಎನೆ ದಾರಿ ಇಲ್ಲ. ದಾಂಪತ್ಯ ಇದ
ಉಳಿಸುವುದು ಎಂತಪ್ಪ ? ದಾಂಪತ್ಯ ಅಳಿಯಿತು.
ಇವರಿವರ ಪಥ ಬೇರೆ ಆದವು. ಇಂತಿರುತ
ಬಾಳಿನಲಿ ಉಳಿದಿರುವ ಕಾಲವನು ಯಾವ ತೆರ
ಚೆನ್ನ ಮಾಡಲು ಬಹುದು ಎಂದು ಯೋಚಿಸಬೇಕು.
ಇದನು ಸಂನ್ಯಾಸಿ, ಪೂರ್ವಾಶ್ರಮದ ಸತಿ, ಇವರು
ತಾವೆ ಬಲ್ಲರು. ಕಾಣದಿಹ ವಿವರ ಇದೆ ಎನಲು
ನನ್ನ ಕೇಳಿರಿ. ನಾನು ಆರೈಸಿ ಹೇಳುವೆನು.
ಸಂನ್ಯಾಸಿಗಳ ಭಿಕ್ಷೆ ?

ಹಿರಿಯ

ಕೆರೆಯ ಮಂಟಪದ ಬಳಿ
ಇವರಿಳಿದುಕೊಳ್ಳಲಿ. ನಾನು ಭಿಕ್ಷೆಯನೊಯ್ದು
ಸಲಿಸಿ ಬರುವೆನು.

ಭಟ್ಟ

ಒಳಿತು. ಇಂತಾಗಬಹುದಲ್ಲ ?

ಮನ್ನಾರ್

ಹಿರಿಯರಾಣತಿ. ತುರೀಯಾಶ್ರಮದ ಮಾತು ಅದು
ಏನಿದ್ದರೂ ನಾನು ಶಿಷ್ಯ ಮನ್ನಾರ್ ; ತಾವು
ನನ್ನ ಹಿರಿಯರು, ನನ್ನ ಗುರು, ನನ್ನ ದೇವರು.

ಭಟ್ಟ

ಒಳಿತು; ಮಂಟಪದತ್ತ ನಡೆವುದಾಗಲಿ. ನಾನು
ಇಲ್ಲಿ ಮಾತಾಡಿ ತಮ್ಮನು ಅಲ್ಲಿ ಕಾಣುವೆನು.

## ಸ್ಥಾನ ೫

(ಕೆರೆ ಕಟ್ಟೆಯ ಮೇಲಣ ಮಂಟಪ. ಅಂದಿನ ರಾತ್ರಿ ಹತ್ತು ಗಳಿಗೆ ಕಳೆದಿದೆ. ಮನ್ನಾರ್ ಮಂಟಪದ ಮುಂದೆ ಕುಳಿತಿದ್ದಾನೆ. ಅತ್ತುಳಾಯ್ ಅಲ್ಲಿಗೆ ಬರುತ್ತಾಳೆ.)

ಮನ್ನಾರ್

(ಅವಳನ್ನು ನೋಡಿ) ನೀನಿಲ್ಲಿ ಬರಭಾರದು.

ಅತ್ತುಳಾಯ್

ಇದೇ ಕೊನೆಯ ಸಲ.

(ಎನ್ನುತ್ತಾ ಅವನೆದುರು ಕುಳಿತು)

ಇನ್ನು ನಾ ನಿನ್ನ ಕಾಣುವುದಿಲ್ಲ. ನಾನೀಗ
ಏನೇನ ಹೇಳುವೆನು ಈ ಎಲ್ಲ ಮಾತನೂ
ನೀನು ಸುಮ್ಮನೆ ಕೇಳು. ಮನವಿಲ್ಲ, ಮರುಮಾತು
ಆಡುವುದು ಬೇಡ. ಯಾರೋ ಪಾಪಿ ಜನ ನಮ್ಮ

ಸುಖದ ಬಾಳನು ಕೆಡಿಸಬೇಕೆಂದು ನಿನಗಲ್ಲಿ
ನನಗಿಲ್ಲಿ ಇಲ್ಲಿ ನಾ ಅಲ್ಲಿ ನೀ ಸತ್ತೆವು
ಎಂದು ಸುಳ್ಳನು ಹೇಳಿ ಹರಹಿದರು. ಸತ್ತವಳ
ಕರ್ಮವನು ಮಾಡಲೋಸುಗವಾಗಿಯಾದರೂ
ನೀ ಮರಳಿ ಊರಿಗೈತರುವವನು ಎಂದವರು
ತಿಳಿದಿದ್ದರಲ್ಲವೆ ? ಹತ್ತು ದಿನ ದುಃಖಿಸಲಿ,
ಆಮೇಲೆ ಸುದ್ದಿ ಸುಳ್ಳೆಂದು ತಿಳಿದುದೆ ತಾವೆ
ಮತ್ತೆ ಸುಖ ಕಾಣುವರು, ಎಂದವರು ಎಣಿಸಿದರು.
ನೀ ಮಾಡಿದುದು ಏನು ? ಇನ್ನು ನಾ ಊರತ್ತ
ಹೋಗಲಾರೆನು, ಎತ್ತಲೋ ಹೋಗಿ ಸಂನ್ಯಾಸಿ
ಆಗುವೆನು, ಎಂದು ನಿಶ್ಚಯಿಸಿದೆ. ಇಲ್ಲಿಗೆ
ಅಪ್ಪನವರಡಿ ಸಾರಿ ಬಂದೆ. ಒಳಿತಾಯಿತು.
ಯಾತ್ರೆ ಹೋಗಿದ್ದು ಬಾ, ಆ ಮೇಲೆ ಸಂನ್ಯಾಸ,
ಎಂದವರು ಬೆಸಸಿರಲು, ಅಂತೆ ಆಗಲಿ ಎಂದು
ಹೋದವನು, ಬಹ ಮುನ್ನ ದಾರಿಯಲಿ ಸಂನ್ಯಾಸ
ದೀಕ್ಷೆಯನು ಕೊಂಡೆ. ಇಲ್ಲಿಗೆ ಬಂದೆ. ಹೆಂಡಿರು
ಜೀವಿಸಿರುವುದ ಕಂಡೆ. ತಪ್ಪು ತಿಳಿವಳಿಕೆಯಲಿ
ಕೊಂಡ ಸಂನ್ಯಾಸ ಇದು ನಿಲ್ಲುವುದು ತಕ್ಕುದೇ ?
ನೀನೆ ಯೋಚಿಸಿ ಹೇಳು. ನಿಲ್ಲಬೇಕೆನ್ನುವೆಯ
ನೀ ಮಾಡಿದುದು ಏನು ? ನಮ್ಮ ಸೌಖ್ಯದ ಬಾಳ
ನೋಡಿ ಧರಿಸದೆ ಹೋದ ಜನ ಏನ ಬಯಸಿದರು
ಅದಕಿಂತ ಹಿರಿದಾದ ಕೇಡ ನೀನೇ ಅಪ್ಪಿ
ಹಿಡಿದುಕೊಂಬುದು. ಇದನು ಜಾಣೆನಲು ಬರುವುದೇ ?
ಪಾಪಿಗಳಿಗೇ ಜಯವೆ ? ಅವರ ಸುಳ್ಳಾಟಕ್ಕೆ
ಅವರದುರು ನೋಡಿದುದಕಿಂತ ಹೆಚ್ಚಿನ ಫಲವೆ ?
ಮೂಗ ಕುಯ್ಯುವೆನೆಂದು ಬಂದವರ ಅಲಗಿಗೆ

ಕೊರಳನೇ ಕೊಡುವುದೆ ? ಗಂಡ ಸತ್ತನು ಎಂದು
ನಾ ಸಾವೆನೆಂದೆ. ನನ್ನನು ಅಮ್ಮ ತಡೆದಳು.
ಇತ್ತ ಕರೆತಂದಳು. ನಾನು ಸತ್ತೆನು ಎಂದು
ನೀ ಎತ್ತ ಬಂದೆಯೋ ಅತ್ತಲೇ ನಾ ಬಂದೆ
ನೀ ಇಲ್ಲವಾದೆಯೇ ಎಂದು. ಬಂದವಳಿಲ್ಲಿ
ನೀ ಜೀವಿಸಿಹುದು ತಿಳಿದೆನು. ನಮ್ಮ ಊರಿನಲಿ
ಉಸಿರ ನೀಗಿದ್ದೆನೇ ಅದು ಎಂಥ ಅವಿವೇಕ
ಆಗಿತ್ತು ಎಂದುಕೊಂಡೆನು. ಜೀವನದ ದೈವ
ಕಾಪಾಡಿತೆಂದದಕೆ ಕೈ ಮುಗಿದು ಕಾದೆನು.
ಸಂನ್ಯಾಸಿಯಾಗುವುದೆ ದೈವೇಚ್ಛೆಯಾಗಿತ್ತೆ
ಅದು ನನ್ನನಿಲ್ಲಿಗೇತಕೆ ಕರೆದು ತರುತಿತ್ತು ?
ಸಂನ್ಯಾಸಿ ಆಗಬಂದವನಿಲ್ಲಿ ಸಂನ್ಯಾಸಿ
ಆಗಿದ್ದೆ. ನಾನಲ್ಲಿ ಊರಿನಲಿ ಇರುತಿದ್ದೆ.
ಸಂನ್ಯಾಸ ಬೇಡ ಎನ್ನುವುದೆ ದೈವದ ಇಚ್ಛೆ
ಎನ್ನುವುದು ಇದರಿಂದ ಕಾಣದೇ ? ಇಷ್ಟೆ ಎನೆ
ನಾ ನೀನು ಯಾತ್ರೆ ಹೊರಡುವ ಮುನ್ನ ಈ ಊರ
ಸೇರಿದರು ಆಗಿತ್ತು. ಇಲ್ಲ ನೀ ಗುರುಗಳಿಗೆ
ಮಾತು ಕೊಟ್ಟಿದ್ದಂತೆ ಸಂನ್ಯಾಸ ಕೊಂಬುದನು
ಹಿಂತಿರುಗಿ ಬಹವರೆಗೆ ತಡೆದಿರಲು ಆಗಿತ್ತು.
ನಾ ಬರುವ ಮುನ್ನವೇ ಹೊರಟು ಮರಳುವ ಮುನ್ನ
ಸಂನ್ಯಾಸ ಕೊಂಬಂತೆ ಗೆಯ್ದು ದೈವದ ಇಚ್ಛೆ
ಏನೆಂದು ಇರಬಹುದು ?

ಮನ್ನಾರ್

ಏನೆಂದು ಇರಬಹುದು ?

ಅತ್ತುಳಾಯ್

ಏನೆಂದು ಯೋಚಿಸುವ. ನನಗೆಂತು ತೋರುವುದು,

ನಾ ಹೇಳುವೆನು ಕೇಳು. ತಪ್ಪು ತಿಳಿವಳಿಕೆಯಲಿ
ಕೊಂಡ ಸಂನ್ಯಾಸ ತಿಳಿವಳಿಕೆ ತಪ್ಪಿತು ಎಂದು
ತಿಳಿದೊಡನೆ ಬದ್ಧ ಅಲ್ಲದೆ ಹೋಗಬೇಕೆಂದು
ಶಾಸ್ತ್ರವಾಗಲಿ ಎಂದು.

ಮನ್ನಾರ್

ಯೋಚಿಸಲು ಇನ್ನೊಂದು
ಊಹೆಯೂ ಅಷ್ಟೆ ಸರಿಯಾಗುವುದು.

ಅತ್ತುಳಾಯರ್

ಏನದು ?

ಮನ್ನಾರ್

ಈ ಹುಚ್ಚ ಬಾಳುವೆಗೆ ಅತಿ ಕಚ್ಚಿಕೊಂಡಿಹನು.
ಇವನು ಸಂನ್ಯಾಸಿ ಆಗುವುದೊಳಿತು. ಹೆಂಡಿರು
ಸತ್ತಳೆನೆ ಸಂನ್ಯಾಸಿಯಾಗುವನು. ಅದಕಾಗಿ
ಸುಳ್ಳು ಸುದ್ದಿಯಿದು ಹುಟ್ಟಲಿ. ಇವನ ಹೆಂಡಿರು
ಸಾಯಲಿಲ್ಲೆನ್ನುವುದು ಇವನು ಊರಿಗೆ ಹೋಗೆ,
ತಿಳಿಯೆ ಬರುವುದು. ಇವನು ಊರ ಹೋಗಲು ಬೇಡ.
ಗುರುವತ್ತ ಬರಲಿ. ಇಲ್ಲಿಯೆ ಇರಲು ಹೆಂಡಿರು
ಇತ್ತ ಬರುವಳು. ಇವನು ಬೇರೆಯೆಡೆ ನಡೆಯಲಿ.
ಗುರುವಿನಪ್ಪಣೆಯಂತೆ ಮರಳಿ ಬಂದೇ ಇಲ್ಲಿ
ಸಂನ್ಯಾಸ ಕೊಂಬೆನೆಂದನೆ ಬಂದವನು ತನ್ನ
ಹೆಂಡಿರನು ಕಾಂಬನು, ಸಂನ್ಯಾಸ ತಪ್ಪುವುದು,
ಅದರಿಂದ ಈಯೆಡೆಗೆ ತಿರುಗಿ ಬಹ ಮುನ್ನವೇ
ಸಂನ್ಯಾಸಿಯಾಗಿರಲಿ. ಇಂತು ಚಿಂತಿಸಿತಹುದು
ದೈವ, ಎನೆ ನಡೆಯದೆ ?

ಅತ್ತುಳಾಯ್

ನಡೆಯುವುದು. ಆದರೆಯು
ಅದು ನನ್ನನೀಯೆಡೆಗೆ ನಡೆಸಿ ತಂದಿತು ಎಂಬ
ವ್ಯಾಪಾರ ಇದಕೆ ಒಂದರ್ಥ ಇಲ್ಲಾಗುವುದು.
ಅದು ಇರಲಿ. ನಾ ನಿನ್ನ ಮಾತಿನಲಿ ಸೋಲಿಸಿ
ನಿನ್ನ ಆಟದಿ ಗೆದ್ದ ಪಣವೆಂದು ಒಯ್ಯುವದಕೆ
ಬರಲಿಲ್ಲ. ಕೊನೆಯಾಗಿ ಹೇಳು. ಸಂನ್ಯಾಸ ಇದ
ಬಿಟ್ಟು ನೀ ನನ್ನೊಡನೆ ಬಾಳುವುದು ಸಾಧ್ಯವೇ ?
ಇಲ್ಲ ನೀ ನಿನ್ನ ದಾರಿಯ ಹಿಡಿದು ನಡೆದಿರಲು
ನಾ ನನ್ನ ದಾರಿಯಲಿ ಹೋಗಬಹುದೆಂಬೆಯಾ ?

ಮನ್ನಾರ್

ದಿಟ ನುಡಿಯೆ, ಅದೆ ನನ್ನ ಮಾತೆಂದು ಹೇಳಲು
ನನ್ನ ಮನ ಸಿದ್ಧವಾಗಿದೆ. ಇದರ ಪರಿ ನನಗೆ
ಆಶ್ಚರ್ಯ : ನಾಲ್ಕು ತಿಂಗಳ ಹಿಂದೆ ಇದೆ ನನಗೆ
ಸಂಸಾರಿಯಾಗಿ ಬಾಳುವ ಆಸೆ ಎನಿತಿತ್ತು
ಈಗಲನಿತೂ ಅನಿತಸಡ್ಡೆಮೂಡಿದೆ. ಏನು,
ಗುರುಗಳಡಿಯನು ಮುಟ್ಟಿ ಮನ ಪಡೆದ ಶಾಂತಿಯೋ,
ದೀಕ್ಷೆ ಕೊಟ್ಟವರ ಹಿರಿ ತಪಸಿನದು ಮಹಿಮೆಯೋ,—
ಆರೈಸಿ ಬಂದ ಔದಾಸೀನ್ಯ ಅಲ್ಲ ಇದು ;
ಆರೈಸಿದುದು ಇಲ್ಲ ; ಇದ ನಾನು ಬಲ್ಲೆನು ;—
ನನಗೀಗ ಸಂಸಾರ ಬೇಕು ಎನ್ನಿಸುತಿಲ್ಲ :
ಅಲ್ಲ ಅಷ್ಟೇ ಅಲ್ಲ, ಬೇಡ ಎನಿಸುತಲೆ ಇದೆ ;—
ನನ್ನ ದಾರಿಯ ನಾನು ಹಿಡಿದಾಯ್ತು, ನಿನ್ನದನು
ನೀ ಹಿಡಿದು ನಡೆ, ಎನ್ನಬೇಕು ನಾಲಗೆ. ನಿನ್ನ
ಮುಖ ನೋಡಿ, ಇವಳದೆನ್ನುವ ದಾರಿ ಯಾವುದು
ಎಂದು ಮನ ಅದನು ತಡೆದಿದೆ.

ಅತ್ತುಳಾಯ್

ನನ್ನ ಮುಖ ನೋಡಿ ?
ಈ ಮಸುಕು ಬೆಳಕಿನಲಿ ನನ್ನ ಮನಸಿನ ಭಾವ
ನನ್ನ ಮುಖದಲಿ ಅಸಿತು ತೆರೆ ಕಳೆದು ಕಾಣುವುದೆ ?
ಕಂಡಿತು. ಸಂನ್ಯಾಸ ಸಿದ್ಧಿಸಿದ ಚೇತನಕೆ
ಪೂರ್ವಾಶ್ರಮದ ಹೆಂಡಿರನು ಕುರಿತ ಇಂತಪ್ಪ
ಕಳಕಳಿ ಅಯೋಗ್ಯ ಅಲ್ಲವೆ ? ದೀಕ್ಷೆ ಕೊಂಬವರು
ನೀರಿನಲಿ ನಿಂತು ಸಂನ್ಯಸ್ತಂ ಮಯಾ ಎಂದು
ಮೂರು ಸಲ ಘೋಷಿಸುವರೆಂದು ನಾ ಕೇಳಿಹೆನು.
ಎನೆ, ಎಲ್ಲವನು ತೊರೆದೆ, ಎಂದು ಆ ಮೂರು ಸಲ
ವಚನ ಕೊಡುವರು ಅವರು ನೆಲ ನೀರು ಮುಂತಾದ
ಐದು ತತ್ತ್ವಕೆ. ಇಂತು ತೊರೆದವರು, ಪೂರ್ವದಲಿ
ಹೆಂಡಿರಾಗಿದ್ದವಳ ಕತೆಯ ಮರೆವುದು ಯೋಗ್ಯ.
ಏನಾಗುವಳೊ ಆಗಿಹೋಗಲಿ, ನನಗೇನು,
ಎನ್ನುವುದೆ ಸರಿಯಾದ ಸಂನ್ಯಾಸ.

ಮನ್ನಾರ್

ದಿಟ ನುಡಿದೆ.
ಮರೆತಿದ್ದ ಶಪಥವನು ಮರಳಿ ಮನಸಿಗೆ ತಂದೆ.
ಇನ್ನು ನೀನಿಲ್ಲಿ ನಿಲ್ಲುವುದು ನಿನಗೂ ಕೇಡು.
ನಡೆ. ಬಿಡಾರಕೆ ಹೋಗು. ನಾಳೆ ಗುರುಗಳ ಕಂಡು
ಅವರೆಂತು ಬೆಸಸುವರು ಬರುವ ದಿನಗಳಲಂತು
ಬಾಳ ನಡೆಸುವುದೆಂದು ಮನಮಾಡು.

ಅತ್ತುಳಾಯ್

ಇದು ಕೂಡ
ನೀ ನನಗೆ ಹೇಳಬಹ ಮಾತಲ್ಲ. ನಿನ್ನ ಗುರು

ನನ್ನಪ್ಪ.  ಅಪ್ಪ ಹೇಳುವ ರೀತಿ ನಡೆಯುವುದು
ನಡೆಯದಿರುವುದು ನನ್ನ ಇಷ್ಟ.  ಅದರಾಗೊಡವೆ
ಸಂನ್ಯಾಸಿ ಆದ ಗಂಡನಿಗೇಕೆ ?  ನಡೆಯೆನೇ,
ರೌರವಕೆ ಹೋಗುವೆನು.  ನಿನ್ನ ಸಂನ್ಯಾಸವನು
ಕೆಡಿಸ ಬಂದಾಗಳೇ ರೌರವದಲೊಂದು ಮನೆ
ನನಗೆಂದು ಸಿದ್ಧವಾದುದನು ನಾ ಬಲ್ಲೆನು.
ನನ್ನ ಮನೆ ಬರಿದಾಗಿ ಇರಲೇಕೆ ?  ನಾ ಅದನು
ಒಡನೆಯೇ ತುಂಬುವೆನು.

ಮುನ್ನಾರ್

ನೀ ನನ್ನನೀ ರೀತಿ
ಬೆದರಿಸುವುದುಚಿತವೇ ?

ಅತ್ತುಳಾಯ್

ಬೆದರಿಸಿದೆನೇ ನಾನು ?
ಅಂತಿರಲು ನಿನಗೆ ನನ್ನನು ಕುರಿತು ಈಗಲೂ
ತುಸು ಆಸೆ ಇದೆ.  ಕೇಳು.  ಇದು ನನ್ನ ಕೊನೆ ಮಾತು.
ಸಂನ್ಯಾಸವನು ಬಿಟ್ಟು ನನ್ನೊಡನೆ ಬಾಳುವೆಯ,
ಬಾ, ಲೋಕ ಏನು ಹೇಳುವುದೆಂದು ಲಕ್ಷಿಸದೆ,
ಮುಂದೆ ಬರಬಹುದೆಂಬ ರೌರವಕೆ ಭಯಪಡದೆ,
ಉಸಿರಾಡುತಿರಿ ಎಂದು ದೇವರಿತ್ತಿಹ ದಿನವ
ನಿನ್ನೊಡನೆ ಸುಖವಾಗಿ ಕಳೆಯುವೆನು.  ಬಾರೆಯಾ
ನಾ ನನ್ನ ದಾರಿಯನು ಹಿಡಿಯುವೆನು.

ಮುನ್ನಾರ್

ದಾರಿ ಅದು
ಯಾವುದು ಎಂದು ನಾ ಕೇಳಿದೆನೆ ನೀ ನನ್ನ

ಮೂದಲಿಸಿ ನುಡಿಯುವೆ. ನಾನು ಕೇಳುವುದಿಲ್ಲ.
ದೈವ ಪ್ರೇರಿಸಿದಂತೆ ನಡೆ. ನಿನ್ನದೆನ್ನುವುದು
ದಾರಿ ಯಾವುದು ಅದನು ಹಿಡಿ ಹೋಗು.

ಅತ್ತುಳಾಯ್

ಇಕೊ, ಹೊರಟೆ.

(ಎಂದು ಅತ್ತುಳಾಯ್ ಸೋಪಾನದಲ್ಲಿ ಇಳಿಯುವಳು)

ಮನ್ನಾರ್

ಎಲೆ ಹುಡುಗಿ! ಏನು ಮಾಡುವಳಿವಳು? ರಘುರಾಮು!

ಅತ್ತುಳಾಯ್

(ಕೊನೆಯ ಹಂತದ ಮೇಲೆ ನಿಂತು)

ನನ್ನ ದೇವರೆ, ನನ್ನ ರಂಗನಾಥ, ನನ್ನ
ಕಾಪಾಡು. ತಾಯಿ ಕಾವೇರಿ, ಈ ನಿನ್ನ ಮಗು
ಅತ್ತುಳಾಯನು ನಿನ್ನ ಮಡಿಲಿನಲಿ ಮಲಗಿಸಿಕೊ.
ನನ್ನ ಪಾತಕವೆಲ್ಲವನು ತೊಳೆದು ಈ ಉಸಿರ
ಬಿಳಿದಾಗಿ ಮಾಡಿ ಇದು ವೈಕುಂಠವನೆ ಸೇರಿ
ರಂಗನಾಯಕಿಯ ಎದುರಲಿ ಅವಳ ಮಗುವಾಗಿ
ಊಳಿಗದ ಆಳಾಗಿ ನಿಲುವುದನನುಗ್ರಹಿಸು.
ರಂಗನಾಥ, ರಂಗನಾಯಕಿ, ಕಾವೇರಿ,
ನಿಮ್ಮ ಮಗು ನನ್ನ ಸಂರಕ್ಷಿಸಿರಿ, ರಕ್ಷಿಸಿರಿ.
(ಎಂದು ನೀರೊಳಕ್ಕೆ ಬೀಳುವಳು)

ಮನ್ನಾರ್

ರಘುರಾಮು! ಇವಳು ನೀರಿಗೆ ಬಿದ್ದೆ ಬಿಟ್ಟಳೇ!
(ಎಂದು ದಡದಡನೆ ಮೆಟ್ಟಲಿಳಿದು ಮೇಲಿನ ಬಟ್ಟೆಯನ್ನು
ಕಳೆದೆಸೆದು ತಾನೂ ನೀರಿಗೆ ಬೀಳುವನು. ಎರಡು ನಿಮಿಷ

ದಲ್ಲಿ ಅತ್ತುಳಾಯನ್ನು ಎತ್ತಿ ಹೊರಕ್ಕೆ ತಂದು ಮೆಟ್ಟಿಲ ಮೇಲೆ ಕೂರಿಸುವನು.)

ಅತ್ತುಳಾಯ್

(ಎರಡು ಕ್ಷಣ ಚೇತರಿಸಿಕೊಂಡು)

ನೀ ಎನ್ನಗೊಡವೆಗೇತಕೆ ಬಂದೆ ?

ಮನ್ನಾರ್

ಎಲೆ ಹುಚ್ಚಿ,
ನೀನಲ್ಲ ಬೇರೆ ಯಾವಳೆ ಹೆಣ್ಣು ನನ್ನೆದುರು
ಇಂತು ನೀರಿಗೆ ಬಿದ್ದಳೆನೆ ನಾನು ಅವಳನು
ಇಂತೆ ಹಿಡಿದೆಳೆತಂದು ಘಟ್ಟದಲಿ ಹಾಕುವನು.
ಗೊಡವೆಯೇನಿದರಲ್ಲಿ ? (ತನ್ನ ಬಟ್ಟೆಯನ್ನು ಕೊಟ್ಟು)
ಒದ್ದೆ ಬಟ್ಟೆಯ ಕಳೆ.
ಇದನು ಸುತ್ತಿಕೊ. ಮನೆಗೆ ಹೋಗಿ ಬೇರೆಯ ಬಟ್ಟೆ
ಉಡಬಹುದು.

ಅತ್ತುಳಾಯ್

(ಆ ಬಟ್ಟೆಯನ್ನು ತೆಗೆದುಕೊಂಡು, ಒದ್ದೆಯನ್ನು ಕಳೆದು ಬೇರೆಯದನ್ನು ಸುತ್ತಿಕೊಂಡು)

ಜೊತೆಗೆ ಬಾ, ಬದುಕೋಣ, ಎಂದೆನು.
ಅದು ನಿನಗೆ ಬೇಡವಾಗಿದೆ. ನೀನು ಇಲ್ಲದೆ
ಬಾಳುವುದು ಬೇಡವಾಗಿದೆ ನನಗೆ. ಸಾಯುವೆನು
ಎಂದು ಗಂಗೆಯ ಮಡಿಲ ಸೇರಿದೆನು. ನೀ ನನ್ನ
ಅಲ್ಲಿಂದ ಸೆಳೆದು ಜೀವಂತ ಹೆಣವಾಗಿರಲು
ಹೊರಗಿಲ್ಲಿ ನಿಲಿಸಿರುವೆ, ಏನು ಮಾಡಲಿ ನಾನು ?

ಮನ್ಸಾರ್

ಹೋಗಿ ಗುರುಗಳ ಕೇಳು.

ಅತ್ತುಳಾಯ್

ಗುರು, ದೈವ, ಪತಿ ಎಲ್ಲ
ನನಗೆ ನೀನೇ. ಸಾಯ ಬಿಡದವನು ನೀ ನನ್ನ
ಕಾಪಾಡಲೇ ಬೇಕು. ನಾ ಇನ್ನು ಬಿಡೆ ನಿನ್ನ.
(ಎಂದು ಹಾರಿ ಮುಂದಕ್ಕೆ ಬಂದು ಅವನ ಕೊರಳನ್ನು
ತೋಳಿಂದ ಅಪ್ಪಿ ಅವನನ್ನು ತಬ್ಬಿಕೊಳ್ಳುವಳು.
ಮುಖಕ್ಕೆ ಮುಖವನ್ನಿಟ್ಟು ಮುದ್ದಿಸುವಳು.)

ಮನ್ಸಾರ್

ಅತ್ತುಳಾಯ್, ಅತ್ತುಳಾಯ್, ಏನ ಮಾಡುತಲಿರುವೆ ?
ಇಬ್ಬರಿಗು ರೌರವ. ಅದರ ಭಯವಿಲ್ಲವೆ ?
ರಘುರಾಮ, ಕೆಟ್ಟೆವು ; ಮನ್ನಿಸು ; ಕಾಪಾಡು.

## ಸ್ಥಾನ ೬

(ಮಂದಿರದ ಮುಂಭಾಗ. ಭಟ್ಟರು ಒಬ್ಬರೇ ಕುಳಿತಿದ್ದಾರೆ.)

ಭಟ್ಟ

ಶ್ರೀವತ್ಸವಕ್ಷ ನತಜನರಕ್ಷ ರಘುರಾಮ
(ಎದುರಲ್ಲಿ ಹಿರಿಯೆ ಕಾಣುತ್ತಾರೆ)
ಬನ್ನಿ ತಾಯಿ, ಬನ್ನಿ; ಸೌಖ್ಯವೇ ? ಇದು ಏನು,
ಮೂರು ತಿಂಗಳ ದಿವಸ ಇತ್ತ ಕಾಣಿಸಲಿಲ್ಲ.
ಅಂದು ನೀವು, ನಿಮ್ಮ ಮಗಳು, ನಾನು, ನಿಮ್ಮ
ಸಂನ್ಯಾಸಿ ಅಳಿಯ, ಇಲ್ಲಿಯೆ ನಿಂತು ಮಾತಾಡಿ

ಸಂನ್ಯಾಸಿ ಮಂಟಪಕೆ ಸಾರಿದರೆ, ಆ ಮೇಲೆ
ಅವರಿತ್ತ ಬರಲಿಲ್ಲ. ನೀವು ಸಹ ಬರಲಿಲ್ಲ.
ಆ ಸಂಜೆ ಮಂಟಪದಿ ನಾನವರ ಕಂಡಾಗ
ಸಂನ್ಯಾಸಿ, "ನಾಳೆ ಬೆಳಗಿಗೆ ತಮ್ಮ ಕಾಣುವೆನು,"
ಎಂದು ಒರೆದರು ನನಗೆ. ಅಂದಿನುದಯದಿ ನಾನು
ಮಂಟಪದ ಬಳಿ ನಡೆದ ವೇಳೆ ಅವರದರಲ್ಲಿ
ಇರಲಿಲ್ಲವೆನ್ನಿಸಿತು. ಉದಯದಾಚಾರಕ್ಕೆ
ಹೊರಗೆ ನಡೆದಿರಬೇಕು ಎಂದುಕೊಂಡೆನು. ಬಳಿಕ
ಅವರು ಬರಲಿಲ್ಲ. ಏನೋ ಎಂದು ಮನಸಿನಲಿ
ಇನಿಸು ಚಿಂತಿಸಿದೆನಾಯಿತು. ವಾಡಿಕೆಯ ರೀತಿ
ನೀವೊ ಇಲ್ಲವೊ ಅತ್ತುಳಾಯ್ ಮಂದಿರಕೆ ಬಂದು
ರಂಗವಲ್ಲಿಯ ಬರೆವಿರೆಂದು ನಾನೆಣಿಸಿದೆನು.
ನೀವು ಸಹ ಬರಲಿಲ್ಲ. ಏನಾಯಿತೋ ಎಂದು
ಅಂದೆಲ್ಲ ಚಿಂತಿಸಿದೆನಹುದು. ಏನೇ ಇರಲಿ,
ರಘುರಾಮ ಇವರೆಲ್ಲರನು ರಕ್ಷಿಸಲಿ, ಎಂದು
ಚಿಂತೆಯನು ದೇವರಡಿಯಲಿ ಇಟ್ಟು ಮುಗಿಸಿದೆನು.
ಈಗಳಾದರು ಬಂದಿರೇ, ತುಂಬ ಸಂತೋಷ.
ಏನಾಯ್ತು ? ಇಷ್ಟು ದಿನ ಎಲ್ಲಿದ್ದಿರಿ ? ಅಳಿಯ
ಎಲ್ಲಿಹರು ಬಲ್ಲಿರಾ ?

ಹಿರಿಯ

ಅಣ್ಣಾಲೇ, ಇದು ಎಲ್ಲ
ದೊಡ್ಡ ಕತೆಯೇ ಆಗಿ ನಿಂತಿಹುದು. ಅದ ನಿಮಗೆ
ಹೇಳುವೆನೆ ಸಂಕೋಚ. ಹೇಳೆನೇ ಗತಿಯಿಲ್ಲ.
ಆದಂತೆ ಅರಿಕೆ ಮಾಡುವೆನು. ಕಣ್ಣಿಗೆ ಕಾಂಬ
ದೈವ, ತಾವದನೆಲ್ಲ ಕೇಳಿ ಮುಂದಕೆ ನಮಗೆ
ದಾರಿ ಯಾವುದು ತಿಳಿಸಬೇಕು.

ಭಟ್ಟ

ಅಂತರ್ಯಾಮಿ
ಏನ ಬೆಸಸುವನದನು ನಿಮಗರುಹುವೆನು ತಾಯಿ.
ಹೇಳಿ; ಸಂಗತಿಯೇನು ?

ಹಿರಿಯೆ

ಅಣ್ಣಲೇ, ಆ ದಿವಸ
ಅಳಿಯ ಮಂಟಪಕೆ, ನಾನೂ ಅತ್ತುಳಾಯ್ ನಮ್ಮ
ಮನೆಗೆ, ಹೋದೆವೆ ಅಂದು ಹಗಲೆಲ್ಲ ಅತ್ತುಳಾಯ್,
ಎಂತು ಚೆನ್ನನೆ ಬೆಳೆದು ಬಂದಿದ್ದ ಸಂಸಾರ
ಎಂತು ಹುಚ್ಚೆದ್ದು ಹೋಯಿತು, ಎಂದು ದುಃಖಿಸುತ,
ತಪ್ಪು ತಿಳಿವಳಿಕೆಯಲಿ ಕೊಂಡ ಈ ಸಂನ್ಯಾಸ
ತಿಳಿವಳಿಕೆ ತಪ್ಪೆಂದು ತಿಳಿದಿರಲು ಊರ್ಜಿತ
ಆಗಬಹುದೇ, ಅಪ್ಪ ಇದಕೆ ಮನ ಕೊಡಬೇಕು,
ಇವನಿಟ್ಟ ಈ ತಪ್ಪು ಹೆಜ್ಜೆ ಕೈ ಹಿಡಿದವಳ
ಬಾಳೆಲ್ಲವನು ಹಾಳು ಮಾಡಲೆನ್ನಲು ಸರಿಯೆ,
ಎಂದು ಕೂಗಾಡಿದಳು. ಹಿಂದಿರುಗಿ ಬರುವನು,
ಎಲ್ಲ ಚೆನ್ನಾಗುವುದು, ಎಂದು ನಾವೆಣಿಸಿದ್ದ
ಪರಿ ಇಂತು ಸುಳ್ಳಾಗಿ ಆಶೆಯೇ ಮುರಿದಿರಲು,
ಹುಡುಗಿ ಹುಚ್ಚೇ ಹಿಡಿಯಿತೆಂಬಂತೆ ಮೊರೆಮೊರೆದು,
ಇರುಳು ತಾ ಹೋಗಿ ಗಂಡನ ಕಂಡು ಮಾತಾಡಿ
ಮಾತ ನಿರ್ಣಯಕೆ ತರುವೆನು ಎಂದು ಹೊರಟಳು.
ಸಾಹಸದ ಈ ಆಟ ಬೇಡ ತಾಯಿ ಎಂದು
ನಾನವಳ ತಡೆದೆನು. ಅವಳು ಕಿವಿಗೊಡಲಿಲ್ಲ.
ಹೊರಟಿಬಿಟ್ಟಳು. ನಾಲ್ಕು ಗಳಿಗೆ ಕಳೆದಿರಬೇಕು
ಹಿಂದಿರುಗಿದಳು. ಸೀರೆ ತೊಯ್ದರ್ಧ ಒಣಗಿತ್ತು.

ಬೇರೆಯುದನುಟ್ಟಳು. ನನಗೆ ಮುಖ ಕೊಡಲಿಲ್ಲ.
ಏತರದೊ ದುಗುಡ, ಏನೋ ದುಃಖ; ಹಗಲಂತೆ
ಕೂಗಾಟ ಇಲ್ಲ. ಇಷ್ಟಾದರು ಸಮಾಧಾನ
ಬಂತಲ್ಲ, ಒಳಿತಾಯ್ತು, ಎಂದುಕೊಂಡೆನು ನಾನು.
ಅರೆಗಳಿಗೆ ಮಲಗಿದ್ದು ಹುಡುಗಿ, "ಅಮ್ಮಾ ನಾನು
ಬಹು ಪಾಪ ಮಾಡಿದೆನು. ಸಂನ್ಯಾಸಿಯಾಗಿರುವ
ಗಂಡನನು ಕೆಡಿಸಿದೆನು," ಎಂದಳು. "ಏನೆ ಇದು,
ನಿನ್ನ ಈ ಮಾತು? ಗಂಡನ ಕೆಡಿಸಿದೆಯ? ಏನು
ನೀ ಹೇಳುತಿರುವುದು?" ಎಂದು ಕೇಳಿದೆ ನಾನು.
ಅವಳ ಮಾತಿಂದ ತಿಳಿಯಿತು: ಇವಳು ಗಂಡನಿಗೆ
ಸಂಸಾರಿಯಾಗು ಬಾ, ಇಲ್ಲ ನಾ ಸಾಯುವೆನು
ಎಂದು ಬೆದರಿಕೆ ಹಾಕಿದಳು; ಅವನು ಈ ಮಾತು
ಸರಿಯಲ್ಲ ನೀ ಮನೆಗೆ ನಡೆ ಎಂದನು; ಇವಳು
ಕೆರೆಗೆ ಬಿದ್ದಳು; ಇವಳ ಸಾಯ ಬಿಡಲಾರದೆ
ಅವನಿವಳ ನೀರಿಂದ ಹೊರಗೆಳೆದು ತಂದನು;
ಬಾಳಲೂ ಬಿಡಲೊಲ್ಲೆ ಸಾಯಲೂ ಬಿಡಲೊಲ್ಲೆ
ಎಂದಿವಳು ಗೋಳುಗರೆದಳು; ಇವಳ ಸಂತಯಿಸಿ
ಮನೆಗೆ ಕಳುಹುವ ಎಂಬ ಯತ್ನದಲಿ ಬಡಪಾಯಿ....
(ಸುಮ್ಮನಾಗುವಳು)

ಭಟ್ಟ

ಸರಿ ತಾಯಿ, ತಿಳಿಯಿತು. ಸಂಕೋಚಪಡಬೇಡಿ.
ನಾನು ಶ್ರೀ ಕೃಷ್ಣನಿಗೆ ಅವನ ತಾಯಿ ಯಶೋದೆ
ಗೆಯ್ದ ಸೇವೆಯ ಗೆಯ್ವೆನೆಂದುಪಾಸನೆ ನಡೆಸಿ
ಇಂಥ ಮಾತಿಗೆ ಒಂದು ಹೆಣ್ಣ ಸಮ ಆಗಿಹೆನು.
ಹೇಳಿರಿ.

ಹಿರಿಯ

ನಡೆದ ಸಂಗತಿ ತಿಳಿದು, ಅಣ್ಣಲೇ,
ನನ್ನುಸಿರು ನಡುಗಿತು. ಇನ್ನೇನು ಗತಿಯೆಂದು
ಭಯದಿಂದ ನಾ ಕರಗಿ ನೀರಾಗಿ ಹೋದೆನು.
ಆಮೇಲೆ, ಇವಳು ತಪ್ಪಾಯಿತೆಂಬುದ ಕಂಡು
ತಪ್ಪು ತನ್ನಿಂದಾಯಿತೆನ್ನುವುದು ಮನಮುಟ್ಟಿ
ಉಮ್ಮಳದೊಳಿಹುದು ಕಂಡಿತು. ಮೆಲ್ಲಮೆಲ್ಲನೆ
ಆಮೇಲೆ ಅವಳು ಹೇಳಿದ ಮಾತು ಇದು. ಇನಿಯ
ತಪ್ಪು ಮಾಡಲೆ ಇಲ್ಲ, ತಪ್ಪೆಲ್ಲ ತನ್ನದು.
ಇಂತಿದ್ದು ಅವನು ದೀಕ್ಷೆಗೆ ತಪ್ಪಿದೆನೆ ಎಂದು
ತುಂಬ ತೊಳಲಿದನು. ತನ್ನ ಅಕೃತ್ಯ ಇದ ಕುರಿತು
ಗುರು ತುಂಬ ದುಃಖಿಸುವರೆಂದು ಪರಿತಪಿಸಿದನು.
ತಾನು ಪುಷ್ಕರಣಿ ಮಣಿಕರ್ಣಿಕಾ ಸರಸಿಗೆ,
ಬದರಿಕಾಶ್ರಮಕೆ, ಸಾರುವೆನು. ಯಾತ್ರೆಯ ಮುಗಿಸಿ
ಬಂದು ಗುರುವನು ಕಾಣುವೆನು. ಇವಳಿಗಿಂತೆಂದು
ತಿಳಿಸಿ ಇವಳಿನಿಯ, ನೀನೂ ಈಗಳೇ ಹೋಗಿ
ಗುರುಗಳನು ನೋಡುವುದು ಬೇಡ, ಕಾಂಚೀಪುರಕೆ
ತಿರುಪತಿಗೆ ಹೋಗಿ ಆ ಸನ್ನಿಧಿಗಳಲಿ ಪೂಜೆ
ಸಲಿಸಿ ಆ ಮೇಲೆ ಬಂದಿವರ ಪಾದವ ಮುಟ್ಟು,
ಎಂದು ಇವಳಿಗೆ ಬೆಸಸಿದನು. ಜೊತೆಗೆ ಹೇಳಿದನು:
ನಿನ್ನ ಮನ ಮುಷ್ಕರದ ಮನ, ಮಾತು ಮಾತಿಗೆ
ಜೀವವನು ತೊರೆಯುವೆನು ಎನ್ನುವುದು ನಿನ್ನ ತೆರ,
ಯಾತ್ರೆಯನು ಮುಗಿಸಿ ಗುರುಗಳನು ಕಾಣುವೆನೆಂದು
ಮಾತು ಕೊಡು, ಎಂದನು. ಇವಳು ಕೊಟ್ಟಳು. ಅವನು
ಅತ್ತ ಹೊರಟನು: ಇವಳು ಮನೆಗೆ ಬಂದಳು.

ಭಟ್ಟ

ಆಯ್ತು,
ತಾಯಿ. ತಕ್ಕಷ್ಟು ಒಳ್ಳಿತೆ ಆಯ್ತು. ಆಮೇಲೆ ?

ಹಿರಿಯೆ

ಇವಳಿಂದ ಇಷ್ಟು ಸಂಗತಿ ತಿಳಿವ ವೇಳೆಗೆ
ಕೋಳಿ ಕೂಗುವ ಹೊತ್ತೆ ಆಗಿತ್ತು. ಇನ್ನೇನು
ಯಾತ್ರೆ ಹೊರಡುವ ಎಂದು ಮನಮಾಡಿ ಇಬ್ಬರೂ
ಹೊರಟೆಬಿಟ್ಟೆವು ಅಣ್ಣಲೇ. ಕಂಚಿಯನು ಸೇರಿ
ವಾರ ಅಲ್ಲಿದ್ದು ಶೇಷಾಚಲಕೆ ಹೋದೆವು.
ಅಲ್ಲಿ ವಾರದ ದಿವಸ ಸೇವೆ ಸಲ್ಲಿಸಿ ಇತ್ತ
ಮರಳಿ ಹೊರಟೆವು. (ತಡೆಯುವಳು)

ಭಟ್ಟ

ಹೇಳುವುದು ಕಷ್ಟವಾಗಿದೆ.
ಆಮೇಲೆ ಹೇಳುವಿರ ?

ಹಿರಿಯೆ

ಕೇಳುತಿರುವವರು ನೀವು.
ನಿಮಗೆ ಹೇಳಲು ಕಷ್ಟವೇ ? ಅಣ್ಣಲೇ, ಈಗ
ಮೂರು ತಿಂಗಳ ಬಸುರಿ ಇವಳು.

ಭಟ್ಟ

ಆಗಲಿ, ತಾಯಿ ;
ಅದು ಒಂದು ಅಪರಾಧವೇ ?

ಹಿರಿಯೆ

ಅಣ್ಣಲೇ, ನಾವು
ನಿಮ್ಮ ಪಾದವ ಮುಟ್ಟೆ ಒಂದು ದಿನ ಇಲ್ಲಿದ್ದು

ಊರತ್ತ ಹೊರಡುವುದು ಎಂದು ಎಣಿಸಿದ್ದೆವು.
ಬಸಿರಿ ಊರಿಗೆ ಹೋದಳೇ ಎಲ್ಲ ಕತೆ ಇದನು
ಆದ ಆಗದ ಎಲ್ಲ ಜನಕೆ ಹೇಳಲೆ ಬೇಕು.
ನಂಬುವರು ನಂಬುವರು. ಹೆರರು ನಂಬುವುದಿಲ್ಲ.
ಸಂಸಾರವನು ಕೆಡಿಸಿ ಸಂತೋಷಪಟ್ಟ ಜನ,
ಇವಳು ದುಷ್ಟಳು, ದಾರಿಕೆಟ್ಟು ಬಸುರಾಗಿಹಳು,
ಎಂದೆ ಹೇಳುವರು. ಇದಕಾಗಿ ನಮ್ಮನು ಅವರು
ಕುಲದಿಂದ ಹೊರಗೆ ಹಾಕಿಸುವುದಕೆ ಹೇಸರು.
ಈಗ ಯಾವುದು ದಾರಿ? ಪ್ರಾಣ ತೊರೆಯುವುದಿಲ್ಲ
ಎಂದು ಗಂಡಗೆ ವಚನಕೊಟ್ಟಿನೆಂದಿವಳೀಗ
ಸುಮ್ಮನಿರುವಳು. ಇಲ್ಲ ಇದಕೆ ಎನಿತೋ ಮುನ್ನ
ಉಸಿರ ನೀಗುತಲಿದ್ದಳು.

ಭಟ್ಟ

ತಾಯಿ, ಅತ್ತುಳಾಯ್
ಹಿರಿದಾದ ಪಾತಕ ಅದೇನನಾದರು ಮಾಡಿ
ಕೆಟ್ಟಳೆಂದೆನ್ನ ಮನಸಿಗೆ ತೋರುತಿಲ್ಲ. ಈ
ಕತೆ ನೀವು ಹೇಳಿದುದು ಯಾವುದಿದೆ, ಇದು ಎಲ್ಲ
ಸಾಧು ಜನ ಮನ್ನಿಸುವ ಸಂಗತಿ. ಊರತ್ತ
ಹೋಗುವುದು ಬೇಡ ಎನ್ನಿಸುತಿದೆಯೆ, ಇಬ್ಬರೂ
ಇಲ್ಲಿಯೇ ನಿಲ್ಲಿ; ಇಲ್ಲಿಯೆ ಹೆರಿಗೆ ಆಗಲಿ.

ಹಿರಿಯೆ

ಆಗಿ? ಮಗುವನು ಏನು ಮಾಡುವುದು?

ಭಟ್ಟ

ಮಗುವನು
ಏನು ಮಾಡುವುದು ಎಂಬಿರಿ ಅಲ್ಲ. ಬಸುರಿಯನು

ವ್ಯಭಿಚಾರಿ ಎಂಬವರು, ಕೂಸೆತ್ತಿ ಬಂದವಳ
ಅಂತೆಂದೆ ದೂರುವರು, ಕುಲದಿಂದ ಹೊರಗೆಸೆದು
ಸಂತೋಷಪಡುವರು, ಎನ್ನುವುದು ನಿಮ್ಮ ಭಯ.

ಹಿರಿಯ

ಅಣ್ಣಲೇ, ಇದು ಬರಿಯ ಭಯ ಅಲ್ಲ. ಆ ಜನಕೆ
ಇದನು ಮಾಡದೆ ತೃಪ್ತಿ ಆಗದು. ಅಂತಪ್ಪ
ನೀಚ ಜನ ಅವರು. ಅವರದು ಅಂಥ ಹೊಟ್ಟೆಯುರಿ.

ಭಟ್ಟ

ಊರತ್ತ ಹೋಗುವುದೆ ಬೇಡ, ಇಲ್ಲಿಯೆ ಇರಿ.

ಹಿರಿಯ

ಇಲ್ಲಿರಲು ಆಯಿತೇ, ಅಣ್ಣಲೇ ? ಊರ ಜನ
ತಮ್ಮ ಸನ್ನಿಧಿಗೆಂದು ಬಂದೆ ಬರುವರು. ಬಂದ
ಯಾರೊ ನಾವಿಲ್ಲಿ ಇಹುದನು ಕಾಣುವರು. ಕಂಡು
ಮಗು ಯಾರದೆನ್ನುವರು. ಯಾರದೆನ್ನುವ ? ಇದಕೆ
ಆ ವೂರು ಈ ವೂರು ಯಾವ ಊರೂ ಒಂದೆ.

ಭಟ್ಟ

(ಕ್ಷಣ ಯೋಚಿಸಿ) ತಾಯಿ, ತಾವು, ನನ್ನ ಮಗು ಅತ್ತುಳಾಯ್, ನನ್ನ
ಮಾತ ಲಾಲಿಸಿ ನನ್ನ ಬೇಡಿಕೆಯ ಸಲಿಸುವಿರ ?

ಹಿರಿಯ

ನಿಮ್ಮ ಕಾಲಿರುವ ಮೆಟ್ಟಲು ನಮ್ಮ ತಲೆಗೆ ನೆಲೆ.
ಮಾತ ಲಾಲಿಸಿ ಬೇಡಿಕೆಯ ಸಲಿಸುವರೆ ನಾವು,
ಅಣ್ಣಲೇ? ಏನು, ಅಪ್ಪಣೆ ಮಾಡಿ.

ಭಟ್ಟ

ಅತ್ತುಳಾಯ್

ನಿಮ್ಮ ಜೊತೆಗಿದ್ದಳೇ ಚೆನ್ನಿತ್ತು.

ಹಿರಿಯ

ಗಂಡನನು

ತಪ್ಪಿಗೆಳೆದೆನು, ಅಂತೆ ನಾ ತಪ್ಪು ಮಾಡಿದೆನು,
ಅಪ್ಪನವರನು ಎಂತು ನೋಡುವುದು, ಎಂದವಳು
ಸಂಕೋಚಪಡುತಿಹಳು.

ಭಟ್ಟ

ಈ ಬ್ರಹ್ಮಚಾರಿ ಪದ

ನನಗೆ ಸಿದ್ಧಿಸಲು ಕೆಲಕಾಲ ಬೇಕೆಂದೆನಗೆ
ತೋರುತಿದೆ. ಮಗಳೆಂದು ನಾ ಕರೆದ ಹೆಣ್ಣೊಂದು
ನನ್ನೆದುರು ಬರಲು ಅದರಿಂದ ಹಿಂದೆಗೆಯುತಿದೆ.

(ಈ ವೇಳೆಗೆ ಮರೆಯಾಗಿ ಬಂದು ಗೋಡೆಯ ಒಂದು ಕಡೆಗೆ ನಿಂತಿದ್ದ ಅತ್ತುಳಾಯ್ ಓಡಿ ಬರುವಳು. ಭಟ್ಟನ ಕಾಲ ಮೇಲೆ ಬೀಳುವಳು.)

ಅತ್ತುಳಾಯ್

ಹಿಂದೆಗೆದೆ ಅಹುದಪ್ಪ ; ತಪ್ಪಾಯ್ತು, ಮನ್ನಿಸಿರಿ.
ಅಂತೆ ನನ್ನಿನಿಯನದು ತಪ್ಪು ಏನಾಯ್ತದನು,
ನನ್ನೆಲ್ಲ ತಪ್ಪನೂ, ನೀವು ಮನ್ನಿಸಿ ನಿಮ್ಮ
ರಘುರಾಮ ಮನ್ನಿಸಲಿ ಎಂದು ಸನ್ನಿಧಿಯಲ್ಲಿ
ನಮ್ಮ ಪರ ಬೇಡಿಕೆಯ ಸಲ್ಲಿಸಿರಿ.

ಭಟ್ಟ

ಸಲ್ಲಿಸುವ,

ನನ್ನ ತಾಯ್ ಅತ್ತುಳಾಯ್, ಸಲ್ಲಿಸುವ. ರಘುರಾಮ

ಪತಿತ ಪಾವನನಕ್ಕ. ಅವನ ಆ ಶುಭ ನಾಮ
ಲೋಕತಾರಕ ನಾಮ. "ತಪ್ಪು ಮಾಡದ ಜೀವ
ಯಾವುದಿದೆ ? ಮನ್ನಿಸುವುದೇ ನಮ್ಮ ಕರ್ತವ್ಯ,"
ಎಂದಳಲ್ಲವೆ ಅವನ ರಾಣಿ ಸೀತಾಲಕ್ಷ್ಮಿ!
ಸರ್ವ ಧರ್ಮವ ತೊರೆದು ಅವರ ಕಾಲನು ಹಿಡಿಯೆ
ಎಲ್ಲ ಪಾಪವ ಕಳೆದು ಸಲಹುವರು ತಾಯ್ತಂದೆ
ಅವರು, ನಮ್ಮೆಲ್ಲರನು.

ಅತ್ತುಳಾಯ್

ನಮ್ಮೆಲ್ಲರನು ಎಂದು
ನೀವೆನ್ನುವಿರಿ ಇದೇ ರಕ್ಷೆ ನನಗೆ, ನನ್ನ
ಕೈಹಿಡಿದ ಗಂಡನಿಗೆ, ಅಪ್ಪ. ಆ ಬಡಪಾಯಿ
ನನ್ನ ಪಾಡನು ನೋಡಿ ಸಹಿಸಲಾರದೆ ತಾನು
ದಾರಿ ತಪ್ಪಿದರಪ್ಪ. ತನ್ನ ಆಸೆಗೆ ಅಲ್ಲ
ನನ್ನ ಕುರಿತೊಂದು ಕನಿಕರಕೆ ಸೋತರು ಅವರು.
ಅನಿತೆ ದಿಟ: ಒಡಲು ಒಪ್ಪಿತು, ಜೀವ ದೃಢವಾಗಿ
ಸಂನ್ಯಾಸಿಯಾಗಿತ್ತು. ಆ ಬಳಿಕ ಆ ಜೀವ,
ದೀಕ್ಷೆ ಕೆಟ್ಟಿತೆ ಎಂದು ಪಟ್ಟ ದುಃಖದ ಬೇಗೆ
ನೋಡಲಾಗದ ಬೇಗೆ, ಹೇಳಲಾಗದ ಬೇಗೆ.
ಎಸಗಿದ್ದ ತಪ್ಪಿಗೊಪ್ಪುವ ನರಕ ಯಾತನೆ
ಎಲ್ಲವನು ಆಗಳೇ ಉಂಡಿತಾ ಬಡಜೀವ.

ಭಟ್ಟ

ಒಳ್ಳಿತಾಯಿತು ತಾಯಿ. ಜೀವನಿಗೆ ಪುಟ ಕೊಡುವ
ಬೇಗೆಗಳು ಇವು. ದೈವ ನಮಗಿಂತು ಪುಟಕೊಟ್ಟು
ತನಗೆ ಒಪ್ಪುವ ತೊಡವ ಗೆಯ್ಯಲೊದಗುವ ಒಳ್ಪೆ

ಚಿನ್ನವನು ಮಾಡಿಕೊಂಬುದು. ಏಕೆ, ಎಂತುಟು,
ಇದು ನಮ್ಮ ಬುದ್ಧಿಗೆಟುಕುವ ಒಂದು ಹದನಲ್ಲ.
ಅಂತೆ ಈ ಆಸೆ ಕನಿಕರ ಎಂಬುದರ ಮಾತು
ನಮಗೆ ಸೇರಿದುದಲ್ಲ. ಆಸೆಯೋ ಕನಿಕರವೊ ?
ಗೌತಮನ ವೇಷದಲಿ ಬಂದ ಇಂದ್ರನ ಚೆಂದ
ಆಸೆ ಕನಿಕರವಾಗಿ ಕಾಣುವುದು. ಇಂತೆ ಸರಿ
ಒಡಲು ಜೀವನ ಮಾತು. ಇದು ಕುದುರೆ, ಇದು ರಥ.
ರಥ ಹರಿದು ಮುಂದಿರುವ ಕುದುರೆಯನು ದೂಡಿತೇ ?
ಕುದುರೆಗಳು ಸೆಳೆದು ಹಿಂದಿದ್ದ ರಥ ಹರಿಯಿತೇ?
ಹೊಣೆ ಜೀವನದು ಅಕ್ಕ. ಜೀವ ಇರುವುದನು ಮರೆ,
ನರರ ಈ ಬಾಳು ಶವಗಳ ಸಂತೆ ಒಂದನಿತೆ.
ಒಡಲು ನಡೆದಿವೆ, ಜೀವ ಅವುಗಳಲಿ ಕುಳಿತಿವೆ,
ಎನಲು ಬಾರದು ತಾಯಿ. ಪ್ರಭು ಜೀವ, ಆಳು ಮೆಯ್.
ತಪ್ಪು ಮಾಡಿದ ಜೀವ ತಪ್ಪಾಯಿತೆಂದೊಪ್ಪಿ
ಮನ ಮರುಗಿ ಮನ್ನಿಸೆಂದೊರಲುವುದು ಶುಭ ತಾಯಿ.
ಇಂತು ಗೆಯ್ಯುತ ತಾನು ಗೆಯ್ದ ತಪ್ಪಿನ ಹೊರೆಯ
ಭಾರವನು ತನ್ನ ಮೇಲೆಯೆ ಹೇರಿಕೊಂಬುದು,
ತಪ್ಪ ಹೊಣೆ ತನ್ನದಲ್ಲೆಂಬನಿತೆ ಅವಿವೇಕ.

ಅತ್ತುಳಾಯ್

ನನ್ನ ಮನ ನಿಮ್ಮ ನುಡಿ ಒಂದೊಂದನೂ ತೀರ
ಒಪ್ಪಿಕೊಳುತಿದೆ ಅಪ್ಪ.

ಭಟ್ಟ

ಅಂತೆಂಬೆಯಾ ? ಒಳಿತು.
ಇದರ ಕಾರಣವನಂತೇ ಮನಸು ಒಪ್ಪಲಿ.
ದೈವದೆದುರಲಿ ಜೀವ ಜಡ ಎರಡು ತತ್ತ್ವವೂ

ಅಸ್ವತಂತ್ರವೆ. ದೈವವೋ ಇಲ್ಲ ಜೀವವೋ
ಎತ್ತದಿರೆ ಜಡ ತಾನು ಕೆಡೆವೆಡೆಯಲೇ ಕೆಡೆದು
ಬಿದ್ದಿಹುದು. ಮೂಲತಃ ದೈವಪ್ರೇರಣೆ ಇಲ್ಲ,
ಜೀವ ಮಿಸುಕದು. ಅದವು ನಡೆಸುತಿರುವುದು ಆಶೆ.
ಅದನು ತಡೆಯುವುದು ಸಂಯಮ. ನರನಿಗೆರಡನೂ
ದೈವವೇ ಕೊಡಬೇಕು. ದೈವ ನೀಡದೆ ನಮಗೆ
ಆಶೆಯೂ ಇಲ್ಲ. ಸಂಯಮವೆಂಬುದೂ ಇಲ್ಲ.
ಕೀಲುಗೊಂಬೆಯ ನಡಸೆ ರಾಟೆಯೊಂದಿದೆಯಲ್ಲ.
ನಡೆಯ ವೇಗವ ತಡೆಯೆ ಅಂತೆ ಬಡೆ ಒಂದು ಇದೆ.
ಇದರ ಬಲ, ಅದರ ಬಲ, ಯಾವುದರ ಬಲ ಹೆಚ್ಚು ?
ಆಸೆಯದು ಬಲ ಹೆಚ್ಚಿ, ಸೋಲುವುದು ಸಂಯಮ.
ಇಂತು ಸಂಯಮ ಸೋತಿತೇ ಎಂದು ಪರಿತಪಿಸಿ
ಫಲವೇನು ? ಜೀವ ಸಂಯಮ ಸಾಲದೆಂದರಿತು
ಮತ್ತಿಷ್ಟು ಸಂಯಮವ ದೈವವಲ್ಲದೆ ಬೇರೆ
ಎಲ್ಲಿಂದಲೋ ಪಡೆಯಬಹುದೆ? ತಪ್ಪಿತು ಜೀವ :
ಇದನು ಒಪ್ಪುವ. ಒಪ್ಪಿಕೊಳುತ ಇವನೂ ನೆನೆವ.
ಅದರ ಅಂದಿನ ಅವಸ್ಥೆಯಲಿ ಆ ಜೀವ ತಾ
ಅಂತಲ್ಲದಿನ್ನೆಂತೆ ನಡೆವುದಕೆ ಅಸಮರ್ಥ.

ಅತ್ತುಳಾಯ್

ಎನೆ ಮಾನುಜರಿಗೆ ತಪ್ಪಿ ನಡೆದುದರ ಹೊಣೆ ಇಲ್ಲ.

ಭಟ್ಟ

ನೀನು ನಡೆಸೆಂದು ಅಂತರ್ಯಾಮಿಯನು ಬೇಡಿ
ನಡೆದಿರಲು ಹೊಣೆಯಿಲ್ಲ ತಾನೆ. ನಾ ನಡೆಯುವೆನು
ಎಂದು ತಿಳಿದಿರುವವಗೆ ಹೊಣೆ ತಪ್ಪಿದುದು ಅಲ್ಲ.

ನನಗೆ ಸಂಯಮ ಸಾಲದೆಂಬೆಸುತ ತಪ್ಪುವುದು
ಸರಿಯಲ್ಲ. ಸರಿಯಾಗಿ ನಡೆಯೆ ಯತ್ನಿಸಿ, ಯತ್ನ
ಫಲಿಸದಿರೆ ಅದ ಕುರಿತು ಕುದಿಯುವುದು ಜಾಣಲ್ಲ.
ತಪ್ಪಿದೆನು ಎಂದು ಹೊಣೆ ಒಪ್ಪಿಕೊಳು ; ಅದೆ ವೇಳೆ,
ನೀನು ನಡೆಸದೆ ನಾನು ಸತ್ಪಥದಿ ನಡೆವೇನೆ,
ಇನ್ನು ನೀನೇ ನಡೆಸು, ಎಂದು ಹೊರೆಯನು ಹರಿಯ
ಪದತಲದೊಳಿರಿಸುವುದ ಕಲಿ. ಹಿರಿಯರರ್ಪಣ
ಎಂದು ಕರೆದುದು ಇದನೆ. ಇದುವೆ ಶರಣಾಗತಿಯು
ಪರಿಣಾಮ ಫಲ. ಇದೆ ಪ್ರಪತ್ತಿ ಎನ್ನುವ ಮಾರ್ಗ.
ಇರಲಿ ಈ ಮಾತು ಇಲ್ಲಿಗೆ ಸಾಕು. ನೀ ಈಗ
ಇಲ್ಲಿ ಬಂದುದು ಒಳ್ಳಿತಾಯ್ತು. ಈ ನನ್ನವ್ವ
ನೀ ಪುತ್ರವತಿಯಾಗಲಿರುವುದನು ತಿಳುಹಿದರು.
ಸಂದರ್ಭದಲಿ ವಿಷಮವೇನಿಹುದು ಒರೆದಿಹರು.
ಹೆರುವ ಮಗುವಿನ ಭವಿಷ್ಯವ ಕುರಿತು ನಾ ಒಂದು
ಮಾತು ಹೇಳುವುದಿತ್ತು. ಅದನು ಹೇಳುವ ವೇಳೆ
ನೀನು ಸಹ ಇಲ್ಲಿರಲು ಚೆನ್ನಿತ್ತು ಎಂದೆನು.
ಅದಕೆ ಸರಿಯಾಗಿ ನೀ ಬಂದೆ.

ಆತ್ತುಳಾಯ್

ಹೇಳಿರಿ, ಅಪ್ಪ.
ಕಷ್ಟದಲಿ ನಮ್ಮ ಕಾಪಾಡಲೆಂದೇ ದೈವ
ನಿಮ್ಮ ರೂಪದಲಿ ಬಂದಿಹುದೆಂದು ತಿಳಿದಿಹೆವು.

ಭಟ್ಟ

ಪ್ರಸವ ದಿನ ಬಹವರೆಗೆ ಇಲ್ಲಿ ಇರಿ. ಹೆತ್ತುದೇ

ಹಸುಳೆಯನು ನನಗೆ ಒಪ್ಪಿಸಿ ಊರ ಕಡೆ ಹೊರಡಿ.
ಮಗು ನನ್ನದಾಗಿರಲಿ, ನಾನದನು ಸಾಕುವೆನು.
(ಅತ್ತುಳಾಯ್ ಕಣ್ಣೀರು ಹಾಕುವಳು)

ಹಿರಿಯ

ಎಂಥ ಉಪಕಾರ ಇದು ಅಣ್ಣಲೇ. ನಿಮಗೆ ಇದು
ಬಹು ಕಷ್ಟ ಆಗುವುದೆ.

ಭಟ್ಟ

ಇಲ್ಲ ತಾಯಿ ; ನನಗೆ
ಇದು ಕಷ್ಟ ಅಲ್ಲ.

ಹಿರಿಯ

ನೀ ಏನೆಂಬೆ ಅತ್ತುಳಾಯ್ ?
ಬಾಯಿ ತೆರೆ.

ಅತ್ತುಳಾಯ್

ಕಷ್ಟದಲಿ ದಾರಿಯೇ ಇಲ್ಲೆಂದು
ನಾನು ಭಯಪಡುತಿದ್ದೆ. ದಾರಿ ಇದೆ, ಅಂತೆ ಅದು
ತುಂಬ ಒಳ್ಳೆಯ ದಾರಿ. ಅಪ್ಪ ದಿಟವಾಗಿಯೇ
ಅಪ್ಪ. ಎಣಿಸದ ರೀತಿ ರಕ್ಷಿಸಿದರೇ ಎಂದು
ನನಗಿನಿತು ಸಂತೋಷ. ಬಾಯಿ ಕಟ್ಟಿತು.

ಭಟ್ಟ

ಒಳಿತು
ತಾಯ್ ಅತ್ತುಳಾಯ್; ಅಂತೆ ಇನ್ನೊಂದು ಮಾತು ಇದೆ.

ಹಿರಿಯ

ಬೆಸಸಿರಿ.

ಭಟ್ಟ

ಹೆರಿಗೆಯಾಗುವ ಮುನ್ನ ತಿಳಿಸಿದ್ದು

ಹೆತ್ತ ದಿನ ಹಸುಳೆಯನು ಮಂಟಪದ ಬದಿಯಲಿಹ

ಅಶ್ವತ್ಥ ಮರದಡಿಯೊಳಿರಿಸಿ ದೂರಕೆ ಹೋಗಿ.

ಆ ಬಳಿಕ ನಾ ಹೋಗಿ ಅದನೆತ್ತಿಕೊಂಬೆನು.

ಅದು ಮೊದಲು ಅದು ನನ್ನ ಸಾಕು ಮಗು. ನೀವು ಅದ

ನಿಮ್ಮದೆಂದೆಣಿಸಬಾರದು. ಬಳಿಕ ಎಂದಿರಲಿ

ಬಂದು ಅದ ಹಿಂದಿರುಗಿ ಪಡೆದೇವು ಎಂದೆಂಬ

ಯೋಚನೆಯು ಮಾಡಬಾರದು.

ಅತ್ತುಳಾಯ್

ಮಗುವ ನೋಡಲೂ

ಬರಬಾರದೇ ?

ಭಟ್ಟ

ನೋಡದಿರುವುದೇ ಒಳ್ಳಿತು.

ಇರುತ, ನೋಡಲೆಬೇಕು ಎಂದು ತೋರಿತೆ, ಬಂದು

ದೂರದಲಿ ನಿಂತು ನೋಡಿರಿ, ನುಡಿಸುವುದು ಬೇಡ.

ನೋಡುತಂತೇ ನಿಂತು, ಇವರು ಯಾರಿರಬಹುದು

ಎಂದು ಮಗು ಯೋಚಿಸುವ ತೆರ ನಡೆಯುವುದು ಬೇಡ.

ತನ್ನ ತಾಯ್ತಂದೆ ಯಾರೆಂದು ಕೇಳಿದ ದಿನಕೆ

ಅದಕೆ ನಾ ಅದು ಅಯೋನಿಜ ಎಂದು ಹೇಳುವೆನು.

ಹಿರಿಯ

ಒಪ್ಪವಮ್ಮ ಅತ್ತುಳಾಯ್.

ಅತ್ತುಳಾಯ್

ಅಂತೆ ಆಗಲಿ ಅಪ್ಪ.

## ಸ್ಥಾನ ೭

(ಆರು ತಿಂಗಳಾಚೆ. ಮಂಟಪದ ಬದಿಯ ಅಶ್ವತ್ಥ ಮರದಡಿಯಲ್ಲಿ. ಸೀರೆಯಲ್ಲಿ ಸುತ್ತಿರುವ ಹಸುಳೆ ಕೆಳಗೆ ಇದೆ. ಭಟ್ಟ ತನಗೆ ತಾನೇ ಮಾತನಾಡುತ್ತಾನೆ.)

ಭಟ್ಟ

ಸೇಲೆಯಲಿ ಸುತ್ತಿಹರು. ರಂಗನಾಯಕಿ ತಾಯಿ
ನರಲೋಕದಲಿ ಹೆಣ್ಣ ಬಾಳ್ನಡಸೆ ಬಂದಿಹರು.
ಓ ತಾಯಿ, ಮಾ ತಾಯಿ, ಬಾರವ್ವ ನನ್ನ ಈ
ಕೈಗಳಿಗೆ. ಎರಡನೆಯ ಯುಗದಿ ಸೀತಾಲಕ್ಷ್ಮಿ
ಎಂತಯೋನಿಜೆಯಾಗಿ ಮೈಥಿಲ ನರೇಂದ್ರನಿಗೆ
ಲಭಿಸಿದಳು, ಅಂತು ನೀನಿಂದು ಲಭಿಸಿಹೆ ನನಗೆ.
ಶ್ರೀಯ ಆ ಅವತಾರ, ವಿಷ್ಣುವಿನ ಅವತಾರ
ರಘುರಾಮನನು ಸೇರಿ, ಲೋಕವನು ಸಲಹಿದಳು.
ಇಲ್ಲಿ ಈ ರೂಪಿನಿಂದೀಗ ಅವತರಿಸಿ ನೀ
ಎಂತು ಪತಿಯನು ಸೇರಲಿಹೆಯೊ ನಾ ಕಾಣೆನದ.
ಎಂತು ಸೇರುವುದೆಂದು ನಿನ್ನ ಮನ, ಆವನ ಮನ,
ನೆನೆದಿಹವೊ ಅಂತು ಅದು ಸಮನಿಸಲಿ. ಅದುವರೆಗೆ
ನಾ ನಿನ್ನ ಪಾಲನೆಯ ಊಳಿಗದಿ ತೊಡಗುವೆನು.
ಸೇವೆಯುದಕೊಂಡು ತಾಯೇ ನನ್ನನುದ್ಧರಿಸು.
ರಂಗನಾಯಕಿ ದೇವಿಯೆಂತು ನೀ ಅಂತೆನಗೆ
ನನ್ನ ಹಡೆದವ್ವನೇ ಮರಳಿ ಬಂದಿರುವಂತೆ
ಕಾಣುತಿಹೆ. ನನಗೆ ಒಡಲಿತ್ತವಳು ಹೆತ್ತೊಡನೆ
ತೀರಿಕೊಂಡಳು ಎಂದು ಹಿರಿಯರೊರೆದುದ ನಾನು
ಕೇಳಿಹೆನು. ತಾಯಂತೆ ಅಕ್ಕನೂ ಮಗುವೊಂದ
ಹೆತ್ತು ಸತ್ತುದ ನಾನು ನೋಡಿದೆನು. ಈ ಹೆಂಗೆ

ಈ ಸಾವುಗಳ ನೆನಹೆ ಕಾರಣವೆ ನಾನಿಂತು
ಬ್ರಹ್ಮಚರ್ಯವ ಹಿಡಿದೆನಹುದು. "ಮಗುವನು ಹೆರದೆ,
ಮಗುವ ಸಲಹದೆ, ನನ್ನ ಸಾಲ ಹರಿಯುವುದಿಲ್ಲ;
ನಾ ಒಂದು ಮಗುವಾಗಿ ನಿನ್ನ ಕೈ ಸೇರುವೆನು ;
ಒಂದು ತಾಯಂತೆ ಅದ ಸಲಹಿ ಋಣವನು ಹರಿಸು,"
ಎಂದು ನನ್ನವ್ವ ನನಗೊರೆಯುತಿಹ ನಿಸುತಿವೆ.
ಅಂತೆ ಆಗಲಿ ತಾಯಿ. ಉಸಿರಾಡುತಿದ್ದೆಯೇ
ಎಂತು ಸೇವೆಯ ಸಲಿಸುತಿದ್ದೆನಂತೇ ಈಗ
ನಿನ್ನ ಪ್ರತಿನಿಧಿ ಕಂದ ಇದನು ಪರಿಚರಿಸುವೆನು.
ಗೆಯ್ವ ಸೇವೆಯ, ತಾಯೆ, ಕೊಳು; ನನ್ನನುದ್ಧರಿಸು.
ಇನ್ನು ಈ ಬ್ರಹ್ಮಚಾರಿಯ ಕೈಗೆ ಬಂದಿರುವ
ಓ ಕಂದ, ನಿನ್ನ ಕುರಿತೆನ್ನ ಮನ ಅಳಲುತಿದೆ:
ರಾಮ ಕಾಡಿಗೆ ಹೋದ ದಿವಸ ಚೊಚ್ಚಲ ಮಗನ
ಹಡೆದ ತಾಯ್ ಸಂತೋಷಪಡಲಿಲ್ಲ ಊರಿನಲಿ.
ಇಂದು ನಿನ್ನನು ಹಡೆದ ತಾಯ ಪರಿ ಅಂತಿನಾ
ತಾಯ ಪರಿಯೇ ಆಯ್ತು. ತಂದೆ ಒಲ್ಲದೆ ಹೋದ.
ತಾಯಿ ಈ ಕಂದ ತನ್ನತು ಎನಲು ಅಂಜಿದಳು.
ಹುಟ್ಟಿದಳೆ ಎಂದು ತಾಯ್ತಂದೆ ಸಂತಸಪಡರು.
ಇಂತಿರುತ ಯಾವ ಸುಖಕೆಂದು ಲೋಕಕೆ ಬಂದೆ
ಎಂದು ಕೇಳೆನು ನಾನು. ಕರೆತಂದ ದೈವವೇ
ನಿನ್ನ ಬಾಳಲಿ ಅನುಗ್ರಹ ತೋರಿ, ಮಗು ನಿನ್ನ
ಸುಖದ ಪಥದಲಿ ನಡೆಸಿ ಸತತವೂ ಜೊತೆಗಿರಲಿ.
ಇನ್ನು ನೀ ನನ್ನ ಮಗು. ನಾನು ನಿನ್ನಯ ತಂದೆ.
ಮಗುವೆಂದು ನಿನ್ನತ್ತ ನೋಡುತಿಹ ಕಣ್ಣಿವಕೆ
ನಿನ್ನ ಈ ಚೆಲುವು ಮನವನು ಕದಿವ ತೆರನಿಹುದು.
ತುಟಿ ಬಾಯಿ ಮುಖ ಕಣ್ಣು ತಂದೆ ತಾಯದಿರವು

ಬೆರೆತ ಒಂದಂದವನು ತೋರುತಿವೆ. ಬೆರಳು ಇವು
ಏನಂದವೇ ಕಂದ. ಪುಟ್ಟ ಈ ಕಾಲುಗಳ
ಬೆರಳು ಇವು ಎನಿತಂದ! ಎನಿತಂದ ಈ ಒಡಲು !
ಇರುತ ಅನಿತಸಹಾಯ. ಇನ್ನೀಗ ದಿವದಿಂದ
ಇಳಿತಂದು ಜಗದ ಕಲ್ಮಷ ಸೋಕಲವಕಾಶ
ಇಲ್ಲಾಗಿ ಹಸುಳೆ ನೀ ಸುಸ್ವಚ್ಛ ಚೇತನದ
ಆತ್ಮ ಒಂದಾಗಿರುವೆ. ಸುಸ್ವಚ್ಛವಾಗಿರಲಿ
ಎಂದೆಂದಿಗೂ ನಿನ್ನ ಬಾಳು. ನಿನ್ನನು ಪಡೆವ
ಮುನ್ನ ತಾಯ್ತಂದೆವಿರು ರಾಮತೀರ್ಥದೊಳಾಳಿ
ಮೆಯ್ ಮನವ ಶುಚಿಮಾಡಿಕೊಂಬಂತೆ ದಯೆಗೆಯ್ದ
ನಿನ್ನ ಭಾಗ್ಯದ ದೈವ, ಸತತವೂ ಜೊತೆಗಿರುತ
ನಿನ್ನ ಚೇತನವ ಸುಸ್ವಚ್ಛ ಪಥದಲಿ ನಡೆಸಿ,
ನೀ ರಂಗನಾಯಕೀ ದೇವಿಯರ ಈ ದಿನದ
ಅವತಾರವೆಂಬಂತೆ, ಕಂದ, ನಿನ್ನನು ಬೆಳೆಸಿ
ಭಕ್ತ ಜನರಗ್ರಪಂಕ್ತಿಗೆ ನಿನ್ನ ಸೇರಿಸಲಿ.
ಬಾ ತಾಯಿ, ಬಾ ಕಂದ; ಲೋಕದೆದುರಲಿ ಇನ್ನು
ನೀ ಆಯೋನಿಜೆ, ಲಕ್ಷ್ಮಿ, ಸೀತೆ, ಭಟ್ಟರ ಮಗಳು.

(ಎಂದು ಮಗುವಿನೊಡನೆ ಮಂದಿರಕ್ಕೆ ಹೊರಡುತ್ತಾನೆ)



